# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಏಪ್ರಿಲ್ ೧೦, ೨೦೧೪ (ಚೈತ್ರ ೨೦, ಶಕ ವರ್ಷ ೧೯೩೬)<br>Bangalore, Thursday, April 10, 2014 (Chaithra 20, Shaka Varsha 1936) | ಸಂಚಿಕೆ ೧೫<br>Issue 15 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ತೋಟಗಾರಿಕೆ ಸಚಿವಾಲಯ

**ವಿಷಯ :** ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯ ವ್ಯಾಪ್ತಿಯಲ್ಲಿ ಬರುವ ಏಳು ಜಿಲ್ಲೆಗಳ ಸ್ಥಿರ-ಚರಾಸ್ತಿಗಳನ್ನು ಹೊಸದಾಗಿ ಆರಂಭವಾಗಿರುವ ಶಿವಮೊಗ್ಗದ ಕೃಷಿ ಮತ್ತು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**

1. ಅಧಿಸೂಚನೆ ಸಂಖ್ಯೆ : ಸಂವ್ಯಶಾಇ 19 ಶಾಸನ 2012, ಬೆಂಗಳೂರು, ದಿನಾಂಕ : 21-09-2012.
2. ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯ, ಪತ್ರ ಸಂಖ್ಯೆ : ಕುಸ/ತೋ.ವಿ.ವಿ.ಬಾ/61/2013/14/588, ದಿನಾಂಕ : 24-04-2013.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆಯನ್ವಯ, ಶಿವಮೊಗ್ಗದಲ್ಲಿ ಕೃಷಿ ಮತ್ತು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯವು ಅಸ್ತಿತ್ವಕ್ಕೆ ಬಂದಿದ್ದು, ಚಿಕ್ಕಮಗಳೂರು, ಶಿವಮೊಗ್ಗ, ಉಡುಪಿ, ದಕ್ಷಿಣ ಕನ್ನಡ, ಕೊಡಗು, ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯು ಹೊಂದಿರುವ ಮತ್ತು ನಿರ್ವಹಿಸುತ್ತಿರುವ ಎಲ್ಲಾ ಸಂಯೋಜಿತ ಕಾಲೇಜುಗಳು, ಸಂಶೋಧನಾ ಕೇಂದ್ರಗಳು ಮತ್ತು ಅವುಗಳಿಗೆ ಹೊಂದಿಕೊಂಡಂಥ ಎಲ್ಲಾ ಬಗೆಯ ಸ್ಥಿರ-ಚರಾಸ್ತಿಗಳನ್ನು ಕೃಷಿ ಮತ್ತು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಶಿವಮೊಗ್ಗಕ್ಕೆ ವರ್ಗಾಯಿಸಲು ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ದಿನಾಂಕ : 21-09-2012ರ ಅಧಿಸೂಚನೆಯನ್ವಯ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯಿಂದ ಕೃಷಿ ಮತ್ತು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಶಿವಮೊಗ್ಗಕ್ಕೆ ವರ್ಗಾಯಿಸಬೇಕಾದ ಸ್ಥಿರ-ಚರಾಸ್ತಿಗಳ ಬಗ್ಗೆ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಹಾಗೂ ಕೃಷಿ ಮತ್ತು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಶಿವಮೊಗ್ಗದ ಅಧಿಕಾರಿಗಳು ದಿ. 27-03-2013ರಂದು ಜಂಟಿ ಸಭೆ ನಡೆಸಿ ವರ್ಗಾಯಿಸಬಹುದಾದ ಸ್ಥಿರ-ಚರಾಸ್ತಿ ಮತ್ತು ಸಿಬ್ಬಂದಿಗಳ ಬಗ್ಗೆ ತೀರ್ಮಾನಿಸಿರುವ ಮಾಹಿತಿಯನ್ನು ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಇವರು ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 418 ತೋಇವಿ 2012, ಬೆಂಗಳೂರು, ದಿನಾಂಕ : 27-08-2013.**

ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯು ತನ್ನ ಆಡಳಿತ ವ್ಯಾಪ್ತಿಯಲ್ಲಿ ಹೊಂದಿರುವ ಸ್ಥಿರ ಮತ್ತು ಚರಾಸ್ತಿಗಳಲ್ಲಿ, ಅನುಬಂಧ-1ರಲ್ಲಿನ ಸ್ಥಿರ ಮತ್ತು ಚರಾಸ್ತಿಗಳನ್ನು ಕೃಷಿ ಮತ್ತು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಶಿವಮೊಗ್ಗಕ್ಕೆ ಹಸ್ತಾಂತರಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ವಿ. ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ.

## ಅನುಬಂಧ–1

**List of movable and im-movable properties of the campuses to be transfered to University of Agricultural and Horticultural Sciences, Shivamoga.**

**1) <u>Hiriyur Campus:-</u>**

| Sl. No. | Description of the property | Qty / Area (Approximately) | Remarks | |
|---|---|---|---|---|
| | | | Survey No | Area (acres) |
| 1. | Agricultural Land | 101.36 Acres | 504 | 5.11 |
| | | | 526 | 3.34 |
| | | | 500 | 4.29 |
| | | | 261 | 2.37 |
| | | | 524 | 5.05 |
| | | | 509 | 4.20 |
| | | | 518 | 4.14 |
| | | | 519 | 3.09 |
| | | | 501 | 4.18 |
| | | | 499 | 5.12 |
| | | | 523 | 3.31 |
| | | | 502 | 3.16 |
| | | | 262 | 4.00 |
| | | | 511 | 3.12 |
| | | | 512 | 3.05 |
| | | | 510 | 3.09 |
| | | | 503 | 5.00 |
| | | | 505 | 4.02 |
| | | | 263 | 4.00 |
| | | | 216 | 0.01 |
| | | | 517 | 2.26 |
| | | | 516 | 4.07 |
| | | | 514 | 4.39 |
| | | | 264 | 4.11 |
| | Note: The details mentioned is as per the available documents in the RHREC 'Hiriyur (Babbur farm). The ownership of lands are yet to be transferred from the UAS. Bangalore | | 507 | 4.03 |
| | | | 506. | 4.05 |
| 2. | Buildings | | | |
| a. | Construction of College Building<br>Ground Floor<br>First Floor | <br>2200.00 Sqm<br>1600.00 Sqm | The actual possession of the building along with the financial status will be handed over on the mutually agreed date | |
| b. | Construction of Boys Hostel Building<br>Ground Floor<br>First Floor | <br>1125.00 Sqm<br>1125.00 Sqm | The actual position of the building along with the financial status will be handed over on the mutually agreed date | |
| c | Construction of Girls Hostel Building<br>Ground Floor<br>First Floor | <br>912.00 Sqm<br>923.00 Sqm | The actual position of the building along with the financial status will be handed over on the mutually agreed date | |
| d | Construction of 'C' type quarters<br>Ground Floor | 192.66 Sqm | The actual position of the building along with the financial status will be handed over on the mutually agreed date | |
| e | Construction of 'E' type quarters<br>Ground Floor<br>First Floor | <br>627.50 Sqm<br>627.50 Sqm | The actual position of the building along with the financial status will be handed over on the mutually agreed date | |

| Sl. No. | Description of the property | Qty / Area (Approximately) | Remarks | |
|---|---|---|---|---|
| | | | Survey No | Area (acres) |
| f | Construction of Orchard Office<br>Ground Floor | 815.00 Sqm | The actual position of the building along with the financial status will be handed over on the mutually agreed date | |
| g | Construction of poly house | 500.00 Sqm | Work completed | |
| h | Construction of mist chamber (2 No.s) | 250.00 Sqm | Work completed | |
| i | Construction of cow shed | 40.00 Sqm | Work completed | |
| j | Construction of shade house | 560.00 Sqm | Work completed | |
| k | Construction of pump house (2 No.s) | 20.00 Sqm | Work completed | |
| 3 | **Vehicles** | | | |
| a | Logan DLE 1.5/ 2WD car | 01 No. | KA-16 M-5370 | The related documents of the vehicle are with the concerned staff of the Hiriyur campus |
| b | 60 seater bus LPO 1512 | 01 No . | KA-16 B-2868 | |
| c | Bolero camper | 01 No. | KA-16 M-4880 | |
| d | John deere tractor with trailer | 01 No. | KA-29 TA-3352/53 | |
| e | Mahindra Yuvaraj -215 Tractor | 01 No. | MH-12 TRV-558 | |
| f | Hero Honda motor cycles | 03 NO.5 | KA-16 U-6709, KA-16 W-3482 and KA-16 B-3090 | |

**2) Mudigere campus :-**

| Sl. No. | Description of the property | Area / Qty | Remarks | |
|---|---|---|---|---|
| | | | Survey No | Area (acres) |
| 1. | Agricultural land<br>RHREC, Mudigere<br>COH, Mudigere<br><br>Total.. | 262.24 Acres<br>75.00 Acres<br><br>337.24 Acres | 39<br>41<br>42<br>43<br>45<br>46<br>47<br>48<br>49<br>50<br>51<br>331<br>371<br>402<br>403<br>331<br>52<br>223<br>200 | 2.32<br>1.28<br>1.02<br>5.25<br>3.14<br>2.36<br>2.28<br>0.23<br>24.06<br>4.32<br>1.300<br>10.00<br>6.080<br>10.00<br>45.00<br>10.00<br>40.00<br>125.00<br>100.00 |
| | Note: The details mentioned is as per the available documents in the RHREC, Mudigere and COH,Mudigere. The ownership of the lands are yet to be transferred from the U.A.S. Bangalore. | | Total Land- 392.24<br>Land belonging to U.A.S Bangalore (-) 55.00 Acres<br>Net available Land 337.24 Acres | |
| **2** | **Buildings** | | | |
| a | Construction of laboratory building<br>Ground Floor<br>First Floor<br>Second Floor | <br><br>204.00 Sqm<br>204.00 Sqm<br>204.00 Sqm | Ground Floor and First Floor Work completedand Rs. 25,00,000.00 has been paid to the agency. Presently the Second Floor work is under 'progress and Rs. 8,00,000.00 has been paid to the agency out of the tendered cost of Rs. 19,00,000.00. | |

| Sl. No. | Description of the property | Area / Qty | Remarks | |
|---|---|---|---|---|
| b | Construction of library building (First Floor) and Girls hostel | 1320.00 Sqm | Work completed | |
| c | Construction of potting shed | 140.00 Sqm | Work completed | |
| d | Construction of ground level water tank | 40.00 Sqm | Work completed | |
| e | Construction of post harvesting technology shed | 72.00 Sqm | Work completed | |
| f | Construction of vehicle shed | 147.00 Sqm | Work completed | |
| g | Construction of poly house and shade house. | 1000.00 Sqm | Work completed | |
| **3.** | **Vehicles** | | | |
| a | 41 seater bus (TATA) | 01 No. | KA-29 A-1419 | The related documents of the vehicle are with the concerned staff of the Mudigere campus |
| b | Mahindra Yuvaraj -215 Tractor | 01 No. | MH-12 TRV-563 | |
| c | Hero Honda Motor cycle | 03 No.s | KA-18 G-0862, KA-18 G-0925 and KA-18 G-0949 | |
| d | Bajaj motor cycle | 01 No. | KA-18 G-0841 | |
| e | John deere Tractor | 01 No. | KA-18 G-3165 | |

**3) Shringeri Campus :-**

| Sl. No. | Description of the property | Area/ Qty | Remarks | |
|---|---|---|---|---|
| 1 | Agricultural land | 6.00 acres | Survey No -169 and 270 | |
| **2** | **Buildings** | | | |
| a | Construction of laboratory / Office building<br>Ground Floor<br>First Floor | <br>521.00 Sqm<br>521.00 Sqm | Work completed | |
| **3.** | **Vehicles** | | | |
| a | Bolero Camper | 01 No. | KA-18 G-0835 | The related documents of the vehicle are with the concerned staff of the Sringeri campus |
| b | Hero Honda Motor cycle | 01 No. | KA-18 G-0870 | |

**4) Horticulture Reseach Station, Ullal**

| Sl. No. | Description of the property | Area/ Qty | Remarks |
|---|---|---|---|
| 1 | Agricultural land | 35.81 Acres | Ownership of the Land is yet to be transferred from UAS, Bangalore. |
| 2 | **Buildings** | | |
| a | Construction of compound wall | 446.00 Mtrs. | Work completed |
| B | Compound of under ground water tank | 5.00 lakh ltr. Capacity | Work Completed |

**5) Horticulture Research Station, Thirthahalli**

| Sl. No. | Description of the property | Area/ Qty | Remarks | |
|---|---|---|---|---|
| | | | **Survey No.** | **Area (acres)** |
| **1.** | Agricultural Land | 41.22 Acres | 120<br>06<br>07<br>08<br>09<br>10<br>11<br>12<br>13<br>19/1<br>19/2<br>20 | 7.00<br>2.04<br>0.36<br>0.01<br>1.02<br>1.08<br>0.05<br>1.15<br>5.28<br>4.07<br>4,11<br>13.25 |
| | Note: The details mentioned is as per the available documents in the HRS, Thirthahalli. The ownership of the lands are' yet to be transferred from the U.A.S. Bangalore. | | | |
| 2 | **Buildings** | | | |
| a | Construction of poly house | 300.00 Sqm | Work is Completed | |
| 3 | **Vehicles** | | | |
| a | Hero Honda Motor cycle | 03 No.s | KA-14 W-4913, KA-14 W-4915 and KA-14 W- 4916 | The related documents of the vehicle are with the concerned staff of the Thirthahalli campus. |

Note :- The above assets of buildings and vehicles are added / procured after the establishment of University of Horticultural Science, Bagalkot. The remaining property of land, buildings and vehicles are transferred as is where is basis as per the records available with the concerned users of respective college / Research stations

**ಬಿ.ವಿ. ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ.

**PR. 138**

**SC-10**

## ಕಂದಾಯ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಉಜಿರೆ ಗ್ರಾಮದ ಸ.ನಂ. 215/2ಪಿ ಹಾಗೂ ಇತರೆ ಸ.ನಂ. ನಲ್ಲಿ ಒಟ್ಟು 17–54 ಎಕರೆ ಜಮೀನನ್ನು ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಎಜುಕೇಷನಲ್ ಸೊಸೈಟಿ (ರಿ) ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1. ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರ ಪತ್ರ ಸಂಖ್ಯೆ : ಎಲ್‌ಎನ್‌ಡಿ(3)ಸಿಆರ್/128/2007–08, ದಿನಾಂಕ : 10–11–2011
2. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ (3)/06–08–09 (c.f.no. 5744) ಬಿ6 ದಿನಾಂಕ : 19–08–2011 ಮತ್ತು 08–03–2013.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಹಾಗೂ ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಇವರು ಮೇಲೆ ಓದಲಾದ ಪತ್ರಗಳಲ್ಲಿ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಸರ್ಕಾರದ ಆದೇಶದ ಸಂಖ್ಯೆ : ಆರ್‌ಡಿ 14 ಎಲ್‌ಜಿಎ 1972, ದಿನಾಂಕ : 05–09–1972 ಹಾಗೂ 03–01–1973ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು ಉಜಿರೆ ಗ್ರಾಮದ ಸ.ನಂ 215–2ಪಿ ರಲ್ಲಿ 6–93 ಎಕರೆ, 518–2ಪಿ ರಲ್ಲಿ 2–20 ಎಕರೆ, 524–1ಬಿಪಿರಲ್ಲಿ 3–42 ಎಕರೆ, 509–ಪಿರಲ್ಲಿ 7–94 ಎಕರೆ, ಹೀಗೆ ಒಟ್ಟು 20–49 ಎಕರೆ ಜಮೀನನ್ನು ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಶಿಕ್ಷಣ ಸಂಸ್ಥೆ (ರಿ) ಇವರಿಗೆ ವಿದ್ಯಾರ್ಜನೆಗಾಗಿ ಪೂರಕವಾದ ಕಟ್ಟಡಗಳ ಹಾಗೂ ಆಟದ ಮೈದಾನದ ರಚನೆಗೆ 30 ವರ್ಷಗಳ ಅವಧಿಗೆ ಗೇಣಿಗೆ ನೀಡಲಾಗಿದ್ದು, ಈ ಅವಧಿಯು ದಿನಾಂಕ : 05–09–2002 ರಂದು ಕೊನೆಗೊಂಡಿರುವುದಾಗಿ ತಿಳಿಸಿರುತ್ತಾರೆ.

2.ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಶಿಕ್ಷಣ ಸಂಸ್ಥೆಯು ಈ ಜಮೀನುಗಳಲ್ಲಿ ಈಗಾಗಲೇ ಶಾಶ್ವತ ಕಟ್ಟಡಗಳನ್ನು ನಿರ್ಮಿಸಿರುತ್ತದೆ. ರಸ್ತೆಗಳ ನಿರ್ಮಾಣಕ್ಕಾಗಿ ಉಪಯೋಗಿಸಿರುವ ಜಮೀನುಗಳನ್ನು ಹೊರತುಪಡಿಸಿ ಈ ಸಂಸ್ಥೆಯು ಒಟ್ಟು 17–54 ಎಕರೆ ಜಮೀನನ್ನು ಉಪಯೋಗಿಸಿಕೊಂಡಿರುತ್ತದೆ. ಆದುದರಿಂದ ಈ ಸಂಸ್ಥೆ ಈ ಜಮೀನುಗಳನ್ನು ಶಾಶ್ವತವಾಗಿ ಮಂಜೂರು ಮಾಡುವಂತೆ ಕೋರಿರುತ್ತದೆ.

3. ಪ್ರಾದೇಶಿಕ ಆಯುಕ್ತರು ಮೈಸೂರು ವಿಭಾಗ ಹಾಗೂ ಜಿಲ್ಲಾಧಿಕಾರಿ ದಕ್ಷಿಣ ಕನ್ನಡ ಜಿಲ್ಲೆರವರುಗಳ ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2)ಗಳ ವರದಿಗಳನ್ನು ಪರಿಶೀಲಿಸಲಾಯಿತು. ಬೆಳ್ತಂಗಡಿ ತಾಲ್ಲೂಕಿನ ಉಜಿರೆ ಗ್ರಾಮದ ಸ.ನಂ. 215/2ಪಿ ರಲ್ಲಿ 4.44 ಎಕರೆ, ಸ.ನಂ. 518/2ಪಿ ರಲ್ಲಿ 1.81 ಎಕರೆ, ಸ.ನಂ. 524/1ಬಿಪಿ ರಲ್ಲಿ 3.38 ಎಕರೆ, ಸ.ನಂ. 509–ಪಿ ರಲ್ಲಿ 7.91 ಎಕರೆ ಒಟ್ಟು 17.54 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 7(1) (ii) ರಲ್ಲಿ ನಮೂದಿಸಿರುವಂತೆ, ಮಾರುಕಟ್ಟೆ ಬೆಲೆ ಹಾಗೂ ಭೂ ಪರಿವರ್ತನಾ ಶುಲ್ಕ ವಿಧಿಸಿ, ಕೃಷಿಯೇತರ ಉದ್ದೇಶಕ್ಕೆ ಮಂಜೂರು ಮಾಡಲು ನಿಯಮ 7(2)ರಡಿ ಕ್ರಮ ಕೈಗೊಳ್ಳಬಹುದಾಗಿದೆ ಎಂದು ಅಭಿಪ್ರಾಯ ಪಡಲಾಗಿದೆ.

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಲಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 160 ಎಲ್‌ಜಿಎ 2011, ದಿನಾಂಕ : 24–01–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಬೆಳ್ತಂಗಡಿ ತಾಲ್ಲೂಕು ಉಜಿರೆ ಗ್ರಾಮದ ಸ.ನಂ 215–2ಪಿ 509/ಪಿ, 518/2ಪಿ, 524/1ಬಿಪಿ, ರಲ್ಲಿನ ಒಟ್ಟು 17–54 ಎಕರೆ ಜಮೀನನ್ನು ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಶಿಕ್ಷಣ ಸಂಸ್ಥೆ (ರಿ) ಇವರಿಗೆ ದಿನಾಂಕ: 05–09–2002 ರಿಂದ ಭೂ ಮಂಜೂರಾತಿ ಮಾಡಿ ಆದೇಶ ಹೊರಡಿಸುವವರೆಗೆ ಗುತ್ತಿಗೆ ಹಣವನ್ನು ಸರ್ಕಾರಕ್ಕೆ ಪಾವತಿಸಬೇಕೆಂದು ಆದೇಶಿಸುತ್ತಾ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 21ರ ಅಡಿಯಲ್ಲಿ ಪ್ರಚಲಿತ ಮಾರುಕಟ್ಟೆ ದರ ಹಾಗೂ ಇನ್ನಿತರ ಶುಲ್ಕಗಳನ್ನು ವಿಧಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲು ಆದೇಶಿಸಿದೆ.

1. ಮಂಜೂರಾತಿ ಆದೇಶದಲ್ಲಿ ಪ್ರಸ್ತಾಪಿತ ಭೂಮಿಯ ಪ್ರಚಲಿತ ಮಾರುಕಟ್ಟೆ ದರ/ಮಾರ್ಗಸೂಚಿ ದರವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
2. ಮಂಜೂರಾದ ಜಮೀನಿಗೆ ಸಂಸ್ಥೆಯು ಮೂರು ತಿಂಗಳ ಒಳಗೆ ಹಣವನ್ನು ಪಾವತಿಸಿ ಉದ್ದೇಶಿತ ಕಾರ್ಯಕ್ರಮಕ್ಕೆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.
3. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
4. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
5. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
6. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
7. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
8. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
9. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
10. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
11. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
12. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಿವಪ್ರಕಾಶ**

ಪೀಠಾಧಿಕಾರಿ, (ಪ್ರ)

ಕಂದಾಯ ಇಲಾಖೆ (ಭೂ ಮಂಜೂರಾತಿ–2).

PR. 170

SC-25

## ಕಂದಾಯ ಸಚಿವಾಲಯ

**ವಿಷಯ** : ಉಡುಪಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್‌ಗೆ ಕನ್ನಡ ಭವನ ಕಟ್ಟಡ ನಿರ್ಮಾಣಕ್ಕಾಗಿ ಉಡುಪಿ ತಾಲ್ಲೂಕು, ಮೂಡನಿಡಂಬೂರು ಗ್ರಾಮದಲ್ಲಿ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಉಡುಪಿ ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ.ಸಿ.ಆರ್.ಪಿಡಿಆರ್.208/2004–05, ದಿನಾಂಕ : 02–02–2012.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ಇವರು ದಿನಾಂಕ : 22–04–2006 ರಂದು ಸಲ್ಲಿಸಿದ ಪ್ರಸ್ತಾವನೆಯಲ್ಲಿ ಮೂಡನಿಡಂಬೂರು ಗ್ರಾಮದ ಸ.ನಂ. 135/1ಎ1ಬಿ ರಲ್ಲಿ 0–11 1/2 ಎಕರೆ ಜಮೀನನ್ನು ಪ್ರಚಲಿತ ಮಾರುಕಟ್ಟೆ ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ, ಉಡುಪಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿಗೆ ಕಟ್ಟಡ ನಿರ್ಮಾಣಕ್ಕಾಗಿ ಮಂಜೂರು ಮಾಡಲು ಕೋರಿದ್ದರು. ಅಂತೆಯೇ ಸರ್ಕಾರವು ಆರ್‌ಡಿ 92 ಎಲ್‌ಜಿಎ 2003,

ದಿನಾಂಕ : 17-06-2006 ರಲ್ಲಿ ಪ್ರಚಲಿತ ಮಾರುಕಟ್ಟೆ ದರ ಹಾಗೂ ನಿಯಮಾನುಸಾರ ಇತರೆ ವೆಚ್ಚಗಳನ್ನು ವಿಧಿಸಿ ಪ್ರಸ್ತಾಪಿತ ಜಮೀನನ್ನು ಮಂಜೂರಾತಿ ಮಾಡಲು ಜಿಲ್ಲಾಧಿಕಾರಿಗಳಿಗೆ ಸರ್ಕಾರವು ಪೂರ್ವಾನುಮತಿ ನೀಡಿರುತ್ತದೆ.

2. ಅದರಂತೆ ಜಿಲ್ಲಾಧಿಕಾರಿ ಉಡುಪಿ ಜಿಲ್ಲೆ ಇವರು ಪ್ರಸ್ತುತ ಮಾರುಕಟ್ಟೆ ದರ ಮತ್ತು ಇತರ ಶುಲ್ಕಗಳನ್ನು ಒಳಗೊಂಡಂತೆ ಒಟ್ಟು ರೂ. 7,18,218-00 ಗಳನ್ನು ಪಾವತಿಸುವಂತೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಸೂಚಿಸಿದ್ದರು. ಆದರೆ ಉಡುಪಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಸದರಿ ಸಂಸ್ಥೆಯು ಅಗತ್ಯ ಆರ್ಥಿಕ ಸೌಲಭ್ಯಗಳನ್ನು ಹೊಂದಿಲ್ಲದಿರುವುದರಿಂದ ಈ ಮೊತ್ತವನ್ನು ಪಾವತಿಸಲು ಸಾಧ್ಯವಿಲ್ಲವೆಂದು ಹಾಗೂ ಉಚಿತವಾಗಿ ಅಥವಾ ನಾಮ ಮಾತ್ರ ದರದಲ್ಲಿ ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ ಇವರು ಮೇಲೆ ಓದಲಾದ ದಿನಾಂಕ : 02-02-2012ರ ಪತ್ರದಲ್ಲಿ ಕನ್ನಡ ಸಾಹಿತ್ಯ ಪರಿಷತ್, ಉಡುಪಿ ಇವರು 2014-15 ಸಾಲಿನಲ್ಲಿ ಶತಮಾನೋತ್ಸವವನ್ನು ಆಚರಿಸುತ್ತಿರುವುದರಿಂದ ಈ ಪ್ರಕರಣವನ್ನು ಮರು ಪರಿಶೀಲಿಸುವಂತೆ ಹಾಗೂ ಬಳ್ಳಾರಿ ಕನ್ನಡ ಸಾಹಿತ್ಯ ಪರಿಷತ್ ಪ್ರಕರಣದಲ್ಲಿ ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 11 ಎಲ್‌ಜಿಇ 2007 ದಿನಾಂಕ : 31-07-2007ರಲ್ಲಿ ನೀಡಿರುವಂತೆ ರೂ. 101-00ಗಳ ನಾಮ ಮಾತ್ರ ದರವನ್ನು ವಿಧಿಸಿ, ಈ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 05 ಎಲ್‌ಜಿಎ 2013, ಬೆಂಗಳೂರು, ದಿನಾಂಕ : 21-01-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು ಮೂಡನಿಡಂಬೂರು ಗ್ರಾಮದ ಸ.ನಂ. 135/1ಎ1ಬಿರಲ್ಲಿ 0-11 1/2 ಎಕರೆ ಜಮೀನನ್ನು ಉಡುಪಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಇವರಿಗೆ ಕನ್ನಡ ಭವನ ಕಟ್ಟಡ ನಿರ್ಮಾಣಕ್ಕಾಗಿ ರೂ.1,000/- ಗಳನ್ನು (ಒಂದು ಸಾವಿರ ರೂಪಾಯಿಗಳು ಮಾತ್ರ) ವಿಧಿಸಿ ಈ ಕೆಳಕಂಡ ನಿಬಂಧನೆಗಳನುಸಾರ ಮಂಜೂರು ಮಾಡಿದೆ.

1. ಮಂಜೂರಾದ ಜಮೀನಿಗೆ ಸಂಸ್ಥೆಯು ಮೂರು ತಿಂಗಳ ಒಳಗೆ ಹಣವನ್ನು ಪಾವತಿಸಿ ಉದ್ದೇಶಿತ ಕಾರ್ಯಕ್ರಮಕ್ಕೆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.
2. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
4. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
5. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
6. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
7. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
8. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
9. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
10. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
11. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಿವಪ್ರಕಾಶ**

ಪೀಠಾಧಿಕಾರಿ, (ಪ್ರ)

ಕಂದಾಯ ಇಲಾಖೆ (ಭೂ ಮಂಜೂರಾತಿ-2).

**PR. 171**

**SC-35**

## ಒಳಾಡಳಿತ ಸಚಿವಾಲಯ

**ವಿಷಯ :** ಸಿ-ಎಫ್‌ಆರ್‌ಓ ಮಾಡ್ಯೂಲನ್ನು ಜಾರಿಗೊಳಿಸಲು ಉಪಕರಣಗಳನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :** ರಾಜ್ಯ ವಿದೇಶಿಯರ ನೋಂದಣಾಧಿಕಾರಿಯವರ ಕಛೇರಿ ಪತ್ರ ಸಂಖ್ಯೆ : ವಿದೇಶಿ/89/ಜನರಲ್/2009, ದಿನಾಂಕ : 08-02-2013, 27-05-2013, 23-08-2013 ಮತ್ತು 09-01-2014.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ರಾಜ್ಯ ವಿದೇಶಿಯರ ನೋಂದಣಾಧಿಕಾರಿಯವರು ಕೇಂದ್ರ ಸರ್ಕಾರದ ಗೃಹ ಮಂತ್ರಾಲಯದ ಪತ್ರ ಸಂಖ್ಯೆ :25016/115/2010-Imm. ದಿನಾಂಕ : 16-01-2013ರಲ್ಲಿ ಪ್ರತಿಯೊಂದು FRO ಕಛೇರಿಯಲ್ಲಿ ಕಂಪ್ಯೂಟರ್ ಒಳಗೊಂಡಂತೆ 7 ಅಂಶಗಳ ಬಗ್ಗೆ ಅಗತ್ಯ ಸಿದ್ಧತೆ ಮಾಡಿಕೊಳ್ಳುವಂತೆ ಕೋರಿದ್ದು, ನಂತರದ ಪತ್ರಗಳಲ್ಲಿ ಸದರಿ ಉಪಕರಣಗಳನ್ನು ಮೊದಲು ರಾಜ್ಯ ಸರ್ಕಾರ ಖರೀದಿಸಿ, ನಂತರ ಕೇಂದ್ರ

ಸರ್ಕಾರದ ಮೇಜರ್ ಹೆಡ್ 3601–ಗ್ರಾಂಟ್ಸ್‌ನಲ್ಲಿ ಗೃಹ ಮಂತ್ರಾಲಯದಿಂದ ಮರುಪಾವತಿಸಿಕೊಳ್ಳಬಹುದಾಗಿದೆ ಎಂದು ತಿಳಿಸಿರುವುದಾಗಿ ತಿಳಿಸುತ್ತಾ, ಈ ಕುರಿತ ಅವಶ್ಯಕ ಖರ್ಚು ವೆಚ್ಚಗಳನ್ನು ಯಾವು ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಭರಿಸಬೇಕೆಂಬುದರ ಬಗ್ಗೆ ಸ್ಪಷ್ಟೀಕರಣ ಕೋರಿರುತ್ತಾರೆ.

ಮುಂದುವರೆದು, ಐ.ವಿ.ಎಫ್.ಆರ್.ಟಿ. ಯೋಜನೆಯನ್ನು ಜಾರಿಗೆ ತರಲು ಕರ್ನಾಟಕ ರಾಜ್ಯದ ಎಲ್ಲಾ ವಿದೇಶಿಯರ ನೋಂದಾಣಿಧಿಕಾರಿಗಳ ಕಛೇರಿಗಳೂ, ರಾಜ್ಯ ವಿದೇಶಿಯರ ನೋಂದಣಾಧಿಕಾರಿಯ ರಾಜ್ಯ ಗುಪ್ತವಾರ್ತೆ ವಿಭಾಗ ಹಾಗೂ ಒಳಾಡಳಿತ ಇಲಾಖೆಯ ರಹದಾರಿ ಮತ್ತು ವಿದೇಶಿಯರ ಶಾಖೆಯೂ ಸೇರಿದಂತೆ ಒಟ್ಟು 34 ಕಛೇರಿಗಳಲ್ಲಿ ಅವಶ್ಯಕವಿರುವ ಕಂಪ್ಯೂಟರ್ಸ್, ಪ್ರಿಂಟರ್ಸ್‌ಗಳನ್ನೊಳಗೊಂಡಂತೆ ಉಪಕರಣಗಳನ್ನು ಖರೀದಿಸಲು ರೂ. 46,35,000/–(ನಲವತ್ತಾರು ಲಕ್ಷದ ಮೂವತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳು ವೆಚ್ಚವಾಗಬಹುದೆಂದು ಅಂದಾಜು ವಿವರಗಳನ್ನು ಕಳುಹಿಸಿರುತ್ತಾರೆ.

ಈ ಮೇಲೆ ವಿವರಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 51 ಇಎಫ್ಎಸ್ 2013, ಬೆಂಗಳೂರು, ದಿನಾಂಕ : 22–02–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮಿಷನ್ ಮೋಡ್ ಪ್ರಾಜೆಕ್ಟ್ ಅಡಿಯಲ್ಲಿ ವಿದೇಶಿಯರಿಗೆ ಸಂಬಂಧಿಸಿದಂತೆ ಐ.ವಿ.ಎಫ್.ಆರ್.ಟಿ. ಯೋಜನೆಯನ್ನು ಕರ್ನಾಟಕ ರಾಜ್ಯದಲ್ಲಿ ಜಾರಿಗೆ ತರಲು ಎಲ್ಲಾ ವಿದೇಶಿಯರ ನೋಂದಣಾಧಿಕಾರಿಗಳ ಕಛೇರಿಗಳೂ ರಾಜ್ಯ ವಿದೇಶಿಯರ ನೋಂದಣಾಧಿಕಾರಿಯ ರಾಜ್ಯ ಗುಪ್ತವಾರ್ತೆ ವಿಭಾಗ ಹಾಗೂ ಒಳಾಡಳಿತ ಇಲಾಖೆಯ ರಹದಾರಿ ಮತ್ತು ವಿದೇಶಿಯರ ಶಾಖೆಗೂ ಅವಶ್ಯಕವಿರುವ ಉಪಕರಣಗಳನ್ನು ಖರೀದಿಸಲು **ರೂ. 46.35 ಲಕ್ಷಗಳ (ನಲವತ್ತಾರು ಲಕ್ಷದ ಮೂವತ್ತೈದು ಸಾವಿರ ರೂಪಾಯಿಗಳು ಮಾತ್ರ)** ಅನುದಾನವನ್ನು ಕೇಂದ್ರ ಸರ್ಕಾರದ ಮೇಜರ್ ಹೆಡ್ 3601–ಗ್ರಾಂಟ್ಸ್‌ನಲ್ಲಿ ಗೃಹ ಮಂತ್ರಾಲಯದಿಂದ ಮರು ಪಾವತಿಸಿಕೊಳ್ಳುವ ಷರತ್ತಿಗೊಳಪಟ್ಟು 2013–14ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2055–00–114–0–03 Centralized FRO (ಯೋಜನೇತರ) ದಡಿ ಪೂರಕ ಅಂದಾಜು–2ರಲ್ಲಿ ಒದಗಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 70 ವೆಚ್ಚ–11/2014, ದಿನಾಂಕ : 06–02–2014ರಲ್ಲಿ ನೀಡಿರುವ ಸಹಮತಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ : ಆಇ 01 ಟಿಎಫ್‌ಪಿ/ 2013, ದಿನಾಂಕ : 10–05–2013ರನ್ವಯ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್ ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ರಹದಾರಿ ಮತ್ತು ವಿದೇಶಿಯರು).

**PR. 207**

**SC-25**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತವನ್ನು ಸ್ಥಾಪಿಸಲು ಅನುದಾನ ಮಂಜೂರಾತಿ ನೀಡುವ ಕುರಿತು–ಆದೇಶ.

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ : ಹಿಂವಕ 233 ಬಿಸಿಎ 2013, ದಿನಾಂಕ : 23–08–2013 ಮತ್ತು 03–09–2013.
2. ವ್ಯವಸ್ಥಾಪಕ ನಿರ್ದೇಶಕರು, ಡಿಬಿಸಿಡಿಸಿ (ನಿ), ಬೆಂಗಳೂರು ರವರ ಪತ್ರದ ಸಂಖ್ಯೆ : ದೇಹಿನಿ/ಮಪಾವಿ/ವಿಕಅನಿ.ಸ್ಥಾಪನೆ/ಸಿಆರ್–08/13–14, ದಿನಾಂಕ : 19–10–2014.

**ಪ್ರಸ್ತಾವನೆ :**

2013–14ನೇ ಸಾಲಿನ ಸನ್ಮಾನ್ಯ ಮುಖ್ಯಮಂತ್ರಿಯವರ ಆಯವ್ಯಯ ದಿನಾಂಕ : 12–07–2013ರ ಭಾಷಣದಲ್ಲಿ ಶಿಲ್ಪಕಲೆ, ಲೋಹ ಮತ್ತು ಮರಗೆಲಸಗಳಲ್ಲಿ ತೊಡಗಿರುವ ಕುಶಲಕರ್ಮಿಗಳಿಗೆ ಹಣಕಾಸಿನ ಸಹಾಯ ನೀಡುವ ಸಲುವಾಗಿ ವಿಶ್ವಕರ್ಮ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಲಾಗುವುದು. ಇದಕ್ಕಾಗಿ ಆರಂಭಿಕವಾಗಿ ರೂ. 5.00 ಕೋಟಿಗಳನ್ನು ಒದಗಿಸಲಾಗುವುದು ಎಂದು ಘೋಷಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಪತ್ರಗಳಲ್ಲಿ ವಿಶ್ವಕರ್ಮ ಅಭಿವೃದ್ಧಿ ನಿಗಮದ ಸ್ಥಾಪನೆಗೆ ಬೇಕಾದ ಎಲ್ಲಾ ಕ್ರಮಗಳನ್ನು ಜರುಗಿಸಲು ಪ್ರಾರಂಭಿಕವಾಗಿ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರನ್ನು ತಾತ್ಕಾಲಿಕವಾಗಿ ವಿಶ್ವಕರ್ಮ ಅಭಿವೃದ್ಧಿ ನಿಗಮ ಅಧಿಕೃತವಾಗಿ ಸ್ಥಾಪನೆಯಾಗುವವರೆಗೆ ಈ ಹುದ್ದೆಯ ಹೆಚ್ಚುವರಿ ಕಾರ್ಯಭಾರವನ್ನು ವಹಿಸಿಕೊಳ್ಳುವಂತೆ ಸೂಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮದ ಯೋಜನೆಗೆ ಸರ್ಕಾರವು ಲೆಕ್ಕ ಶೀರ್ಷಿಕೆ 2225–03–800–0–29 (ರಾಜ್ಯ ವಲಯ–ಯೋಜನೆ) ಅಡಿಯಲ್ಲಿ ರೂ. 500.00 ಲಕ್ಷಗಳನ್ನು ಒದಗಿಸಿದೆ. ವಿಶ್ವಕರ್ಮ ಅಭಿವೃದ್ಧಿ ನಿಗಮದ ಸ್ಥಾಪನೆಗೆ ಹಂತ ಹಂತವಾಗಿ ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ನಿಗಮದ ವ್ಯವಸ್ಥಾಪಕ ನಿರ್ದೇಶಕರಿಗೆ ಸೂಚಿಸಲಾಗಿದೆ. ಸರ್ಕಾರವು ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮವನ್ನು ಸ್ಥಾಪಿಸುವ ಕುರಿತಂತೆ ಅಗತ್ಯ ಕ್ರಮಕೈಗೊಂಡು ನಿಗಮವನ್ನು ಸ್ಥಾಪಿಸಲು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರಿಗೆ ತಾತ್ಕಾಲಿಕವಾಗಿ ವಿಶ್ವಕರ್ಮ ಅಭಿವೃದ್ಧಿ ನಿಗಮದ ಹೆಚ್ಚುವರಿ ಕಾರ್ಯಭಾರವನ್ನು ವಹಿಸಿದೆ. ವಿಶ್ವಕರ್ಮ ಅಭಿವೃದ್ಧಿ ನಿಗಮವನ್ನು ನೊಂದಾಯಿಸಿ, ಸ್ಥಾಪಿಸಿ ಆ ನಿಗಮದ ಮೂಲಕ ಯೋಜನೆಗಳನ್ನು ಅನುಷ್ಠಾನಗೊಳಿಸಲು ಇನ್ನೂ ಸ್ವಲ್ಪ ಕಾಲಾವಕಾಶ ಬೇಕಾಗುವುದರಿಂದ ಈ ಜನಾಂಗದವರಿಗೆ ಆಯವ್ಯಯದಲ್ಲಿ ಒದಗಿಸಿದ ಅನುದಾನವನ್ನು ಸ್ವಯಂ ಉದ್ಯೋಗ ಯೋಜನೆಗಳಿಗೆ ವಿತರಿಸಲು, ಆಯವ್ಯಯದಲ್ಲಿ ಒದಗಿಸಿದ ಮೊತ್ತವನ್ನು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ ಬಿಡುಗಡೆ ಮಾಡಲು ಪ್ರಸ್ತಾಪಿಸಿ 2013–14ನೇ ಸಾಲಿಗೆ ವಿಶ್ವಕರ್ಮ ಜನಾಂಗದ ಯೋಜನೆಗಳ ಅನುಷ್ಠಾನಕ್ಕೆ ಮೇಲೆ ನಮೂದಿಸಿರುವ ಹೊಸ ಲೆಕ್ಕ ಶೀರ್ಷಿಕೆಯಡಿಯಲ್ಲಿ ಒದಗಿಸಿರುವ ಅನುದಾನ ರೂ. 500.00 ಲಕ್ಷಗಳಲ್ಲಿ ಶೇ 50 ರಷ್ಟು ಭಾಗದ ಅನುದಾನ ರೂ. 250.00 ಲಕ್ಷಗಳನ್ನು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿ ಈ ಬಗ್ಗೆ ಪ್ರತ್ಯೇಕ ವಿಶ್ವಕರ್ಮ ನಿಗಮದಲ್ಲಿ ಪ್ರತ್ಯೇಕವಾಗಿ ನಿಗಮ ಸ್ಥಾಪನೆಯಾಗುವವರೆಗೆ

ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಲ್ಲಿ ಲೆಕ್ಕ ಪತ್ರಗಳನ್ನು ನಿರ್ವಹಿಸಲಾಗುವುದಲ್ಲದೇ, ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮದ ಸ್ಥಾಪನೆಗೆ ಸರ್ಕಾರವು ಬಿಡುಗಡೆ ಮಾಡಿದ ಅನುದಾನದಲ್ಲಿ ಖರ್ಚಾಗದೇ ಉಳಿದ ಮೊತ್ತವನ್ನು ವಿಶ್ವಕರ್ಮ ನಿಗಮಕ್ಕೆ ವರ್ಗಾಯಿಸಲಾಗುವುದೆಂದು ತಿಳಿಸಿರುತ್ತಾರೆ.

2013–14ನೇ ಸಾಲಿನ 12–07–2013ರ ಆಯವ್ಯಯದ ಘೋಷಣೆಯಂತೆ ಲೆಕ್ಕ ಶೀರ್ಷಿಕೆ 2225–03–800–0–29 (ರಾಜ್ಯ ವಲಯ ಯೋಜನೆ) ರಡಿಯಲ್ಲಿ ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಜನಾಂಗದ ಯೋಜನೆಗಳ ಅನುಷ್ಠಾನಕ್ಕೆ ಒದಗಿಸಿರುವ ರೂ. 500.00 ಲಕ್ಷಗಳಲ್ಲಿ ಮೊದಲನೇ ಮತ್ತು ಎರಡನೇ ಕಂತಿನ ಮೊತ್ತ ರೂ. 250.00 ಲಕ್ಷಗಳನ್ನು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿದ್ದು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹಿಂವಕ 233 ಬಿಸಿಎ 2013, ಬೆಂಗಳೂರು, ದಿನಾಂಕ : 03–02–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮದ ಸ್ಥಾಪನೆ ಮತ್ತು ಸಮುದಾಯದ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ 2013–14ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2225–03–800–0–29 (ರಾಜ್ಯ ವಲಯ ಯೋಜನೆ) ರಡಿಯಲ್ಲಿ ಒದಗಿಸಿರುವ ರೂ. 500.00 ಲಕ್ಷಗಳ ಅನುದಾನದಲ್ಲಿ ಮೊದಲನೇ ಮತ್ತು ಎರಡನೇ ಕಂತಿನ ಮೊತ್ತ ರೂ. 250.00 ಲಕ್ಷ (ಎರಡು ನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ವಿಶ್ವಕರ್ಮ ಸಮುದಾಗಳ ಅಭಿವೃದ್ಧಿ ನಿಗಮ ನಿಯಮಿತ ಸ್ಥಾಪನೆಯಾಗುವ ತನಕ ಹಂತ ಹಂತವಾಗಿ ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು ತಾತ್ಕಾಲಿಕವಾಗಿ ಹೆಚ್ಚುವರಿ ಕಾರ್ಯಭಾರವನ್ನು ವಹಿಸಿಕೊಳ್ಳಲು ಸರ್ಕಾರವು ಆದೇಶಿಸಿದೆ.

ಸದರಿ ಮೊತ್ತವನ್ನು ಬಿಡುಗಡೆ ಮಾಡಿರುವ ಉದ್ದೇಶಕ್ಕಾಗಿಯೇ ಉಪಯೋಗಿಸತಕ್ಕದ್ದು.

ವಿಶ್ವಕರ್ಮ ಜನಾಂಗದ ಯೋಜನೆಗಳ ಅನುಷ್ಠಾನಕ್ಕಾಗಿ ಸಂಬಂಧಿಸಿದಂತೆ ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ಅಭಿವೃದ್ಧಿ ನಿಗಮ ಇವರು ಸಲ್ಲಿಸುವ ಸ್ವೀಕರ್ತನ ರಸೀದಿ ಬಿಲ್ಲುಗಳಿಗೆ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಮೇಲು ರುಜು ಪಡೆದು ಹಣ ಡ್ರಾ ಮಾಡತಕ್ಕದ್ದು.

2013–14ನೇ ಸಾಲಿನಲ್ಲಿ ಬಿಡುಗಡೆ ಮಾಡಿದ ಅನುದಾನದ ಹಣ ಬಳಕೆ ಪ್ರಮಾಣ ಪತ್ರವನ್ನು ಮುಂದಿನ ಕಂತಿನ ಅನುದಾನ ಕೋರಿಕೆಯ ಪ್ರಸ್ತಾವನೆಯೊಂದಿಗೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 29 ವೆಚ್ಚ–3 2014, ದಿನಾಂಕ : 22–01–2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಆರ್. ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**PR. 220**

**SC-500**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** 2013–14ನೇ ಸಾಲಿನ (ಜುಲೈ 2013ರ) ಆಯವ್ಯಯ ಭಾಷಣದ ಕಂಡಿಕೆ–507ರಲ್ಲಿರುವ ಘೋಷಣೆಯಂತೆ ಮುಂದುವರೆದ ಯೋಜನೆಯಾದ ಕರ್ನಾಟಕ ರಾಜ್ಯ ವಿಸ್ತೃತಜಾಲ ಯೋಜನೆ (KSWAN)ಯಡಿ ವೀಡಿಯೋ ಕಾನ್ಫರೆನ್ಸಿಂಗ್ ಸೌಲಭ್ಯವನ್ನು ತಾಲ್ಲೂಕು ಮಟ್ಟದವರೆಗೆ ವಿಸ್ತರಿಸುವ ಬಗ್ಗೆ

**ಓದಲಾಗಿದೆ :**
(1) ದಿನಾಂಕ: 05.11.2005ರ ಸರ್ಕಾರಿ ಆದೇಶ ಸಂ: ಸಿಆಸುಇ 18 ವಿಮಾಆ 2005.
(2) ದಿನಾಂಕ: 05.09.2006ರ ಸರ್ಕಾರಿ ಆದೇಶ ಸಂ: ಸಿಆಸುಇ 101 ಕೆಟಿಪಿ 2005.
(3) ದಿನಾಂಕ:30.03.2007ರ ಸರ್ಕಾರದ ಆದೇಶ ಸಂ: ಸಿಆಸುಇ 40 ಇಜಿವಿ 2005.
(4) ದಿನಾಂಕ: 05.06.2007ರ ಸರ್ಕಾರದ ಆದೇಶ ಸಂ: ಸಿಆಸುಇ 33 ಇಆಇ 2007.
(5) ದಿನಾಂಕ: 05.08.2008ರ ಸರ್ಕಾರದ ಆದೇಶ ಸಂ: ಸಿಆಸುಇ 52 ಇಆಇ 2008.
(6) ದಿನಾಂಕ: 02.05.2009ರ ಸರ್ಕಾರದ ಆದೇಶ ಸಂ: ಸಿಆಸುಇ 56 ಇಆಇ 2009.
(7) ದಿನಾಂಕ: 07.04.2010ರ ಸರ್ಕಾರದ ಆದೇಶ ಸಂ: ಸಿಆಸುಇ 30 ಇಆಇ 2010.
(8) ದಿನಾಂಕ: 25.03.2011ರ ಸರ್ಕಾರದ ಆದೇಶ ಸಂ: ಸಿಆಸುಇ 17 ವಿಮಾಆ 2011.
(9) ದಿನಾಂಕ: 09.04.2012ರ ಸರ್ಕಾರದ ಆದೇಶ ಸಂ: ಸಿಆಸುಇ 3 ಯೋಜನೆ 2012.
(10) ಆರ್ಥಿಕ ಇಲಾಖೆಯ ದಿನಾಂಕ: 31.12.2012ರ ಸರ್ಕಾರದ ಆದೇಶ ಸಂ: ಎಫ್‌ಡಿ 146 ಬಿಆರ್‌ಎಸ್ 2012.
(11) ದಿನಾಂಕ: 19.01.2013ರ ಸರ್ಕಾರದ ಆದೇಶ ಸಂ: ಸಿಆಸುಇ 11 ಎಸಿಎ 2012.
(12) ದಿನಾಂಕ: 29.08.2013ರ ಸರ್ಕಾರದ ಆದೇಶ ಸಂ: ಸಿಆಸುಇ 2 ಯೋಜನೆ 2013.

(13) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಇವರ ದಿನಾಂಕ: 26.09.2013ರ ಇ–ಮೇಲ್

(14) ದಿನಾಂಕ: 10.12.2013ರ ಸರ್ಕಾರದ ಆದೇಶ ಸಂ: ಸಿಆಸುಇ 10 ಎಸಿಎ 2013.

(15) ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿನ ಅಧಿಕಾರಯುತ ಸಮಿತಿಯ ದಿನಾಂಕ: 22.11.2013ರಂದು ನಡೆದ ಸಭೆಯ ನಡವಳಿ.

(16) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ(ಇ–ಆಡಳಿತ) ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 23.08.2013ರಂದು ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯ ನಡವಳಿ.

**ಪ್ರಸ್ತಾವನೆ :**

1. ರಾಷ್ಟ್ರೀಯ ಇ–ಆಡಳಿತ ಯೋಜನೆಯಡಿಯಲ್ಲಿ (NeGP), ಕರ್ನಾಟಕ ರಾಜ್ಯದಲ್ಲಿ, ಕರ್ನಾಟಕ ರಾಜ್ಯ ವಿಸ್ತೃತ ಜಾಲ ಯೋಜನೆಯನ್ನು ಜಾರಿಗೊಳಿಸುವ ಏಜೆನ್ಸಿ (implementing agency) ಯಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:05.11.2005ರ ಸರ್ಕಾರದ ಆದೇಶದನ್ವಯ ಇ–ಆಡಳಿತ ಕೇಂದ್ರವನ್ನು ನೇಮಿಸಿ ಆದೇಶಿಸಲಾಗಿರುತ್ತದೆ.

2. ಮೇಲೆ (2)ರಲ್ಲಿ ಓದಲಾದ ದಿನಾಂಕ:05.09.2006ರ ಸರ್ಕಾರದ ಆದೇಶದನ್ವಯ 12ನೇ ಆರ್ಥಿಕ ಆಯೋಗದ ಅನುದಾನವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಇ–ಆಡಳಿತ)ಗೆ ಸಂಬಂಧಿಸಿದ SWAN ಯೋಜನೆ ಮತ್ತು ವಿವಿಧ ಇಲಾಖೆಗಳ ಇತರೆ ಯೋಜನೆಗಳನ್ನು ಜಾರಿಗೊಳಿಸಲು ಅನುದಾನವನ್ನು ಬಿಡುಗಡೆ ಮಾಡಲು ಆದೇಶಿಸಲಾಗಿರುತ್ತದೆ. ದಿನಾಂಕ:05.09.2006ರ ಸರ್ಕಾರದ ಸದರಿ ಆದೇಶದ ಪ್ರಕಾರ, ಮೇಲೆ (3)ರಲ್ಲಿ ಓದಲಾದ ದಿನಾಂಕ: 30.03.2007ರ ಆದೇಶದನ್ವಯ ಕರ್ನಾಟಕ ರಾಜ್ಯ ವಿಸ್ತೃತ ಜಾಲ (KSWAN) ಯೋಜನೆಗಾಗಿ ರೂ. 17.15 ಕೋಟಿಯ ಅನುದಾನವನ್ನು ಇ–ಆಡಳಿತ ಕೇಂದ್ರಕ್ಕೆ ಬಿಡುಗಡೆ ಮಾಡಲಾಗಿದೆ. ಮೇಲೆ (4)ರಲ್ಲಿ ಓದಲಾದ ದಿನಾಂಕ: 05.06.2007ರ ಸರ್ಕಾರದ ಆದೇಶದನ್ವಯ, ಸಿಆಸುಇ(ಇ–ಆಡಳಿತ)ಗೆ ಸಂಬಂಧಿಸಿದ ವಿವಿಧ ಮುಂದುವರೆದ ಯೋಜನೆಗಳನ್ನು, ಕರ್ನಾಟಕ ರಾಜ್ಯ ವಿಸ್ತೃತ ಜಾಲ (KSWAN) ಯೋಜನೆಯೂ ಒಳಗೊಂಡಂತೆ, 2007–08ನೇ ಸಾಲಿನ ಮುಂದುವರೆದ ಯೋಜನೆಗಳೆಂದು ಪರಿಗಣಿಸಿ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಅದೇ ರೀತಿ 2008–09, 2009–10, 2010–11, 2011–12, 2012–13 ಮತ್ತು 2013–14ನೇ ಸಾಲುಗಳಿಗೆ ಸಂಬಂಧಿಸಿದಂತೆ ಸಿಆಸುಇ(ಇ–ಆಡಳಿತ)ಗೆ ಸಂಬಂಧಿಸಿದ ವಿವಿಧ ಮುಂದುವರೆದ ಯೋಜನೆಗಳನ್ನು, ಕರ್ನಾಟಕ ರಾಜ್ಯ ವಿಸ್ತೃತ ಜಾಲ (KSWAN) ಯೋಜನೆಯೂ ಒಳಗೊಂಡಂತೆ, ಕ್ರಮವಾಗಿ, ಮೇಲೆ (5), (6), (7), (8), (9) ಮತ್ತು (12)ಗಳಲ್ಲಿ ಓದಲಾದ ಸರ್ಕಾರಿ ಆದೇಶಗಳನ್ವಯ ಮುಂದುವರೆದ ಯೋಜನೆಗಳೆಂದು ಪರಿಗಣಿಸಿ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಮೇಲೆ (10)ರಲ್ಲಿ ಓದಲಾದ ದಿನಾಂಕ: 31.12.2012ರ ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದನ್ವಯ ಲೆಕ್ಕ ಶೀರ್ಷಿಕೆ "3451–00–090–2–04–059 (ಯೋಜನೆ)" ಯಡಿಯಲ್ಲಿ ಪೂರಕ ಅಂದಾಜುಯಡಿ ರೂ. 1822 ಲಕ್ಷಗಳ ಹೆಚ್ಚುವರಿ ಅನುದಾನವನ್ನು, ಇತರೆ ಯೋಜನೆಗಳೊಂದಿಗೆ, ಕೆಸ್ವಾನ್ ಯೋಜನೆಗಾಗಿ ಮಂಜೂರು ಮಾಡಲಾಗಿದೆ. ದಿನಾಂಕ: 31.12.2012ರ ಸದರಿ ಆದೇಶದ ಪ್ರಕಾರ ಮೇಲೆ (11)ರಲ್ಲಿ ಓದಲಾದ ದಿನಾಂಕ: 19.01.2013ರ ಆದೇಶನ್ವಯ, ಕೆಸ್ವಾನ್ ಯೋಜನೆಗಾಗಿ ‘600 ಲಕ್ಷಗಳನ್ನು ಇ–ಆಡಳಿತ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

3. ರಾಷ್ಟ್ರೀಯ ಇ–ಆಡಳಿತ ಯೋಜನೆ (NeGP) ಯಡಿಯಲ್ಲಿ ಹೆಚ್ಚುವರಿ ಕೇಂದ್ರ ಸಹಾಯ (Additional Central Assistance) ವಾಗಿ ಕೇಂದ್ರ ಸರ್ಕಾರ ದಿನಾಂಕ: 03.09.2013ರ ಅದರ ಪತ್ರ ಸಂ: 44(10) ಪಿಎಫ್1/2013–661 ರನ್ವಯ ಕರ್ನಾಟಕ ರಾಜ್ಯ ವಿಸ್ತೃತ ಜಾಲ (KSWAN) ಯೋಜನೆಗಾಗಿ, ‘700 ಲಕ್ಷಗಳ ಅನುದಾನ ಪಾವತಿ ಮಾಡಲು ಮಂಜೂರಾತಿ ನೀಡಿರುತ್ತದೆ. ಅದರಂತೆ, ಮೇಲೆ (14)ರಲ್ಲಿ ಓದಲಾದ ದಿನಾಂಕ: 10.12.2013ರ ಆದೇಶದನ್ವಯ ರೂ. 700 ಲಕ್ಷಗಳ ಅನುದಾನವನ್ನು ಇ–ಆಡಳಿತ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

4. 2013–14ನೇ ಸಾಲಿನ (ಜುಲೈ 2013ರ) ಆಯವ್ಯಯ ಭಾಷಣದ ಕಂಡಿಕೆ–507 ರನ್ವಯ, "507. ಕೆಎಸ್‌ಡಬ್ಲ್ಯೂಎಎನ್ ಮೂಲಕ ಎಲ್ಲಾ ತಾಲ್ಲೂಕುಗಳಲ್ಲಿ ವೀಡಿಯೋ ಕಾನ್ಪರೆನ್ಸಿಂಗ್ ಸೌಲಭ್ಯವನ್ನು ಕಲ್ಪಿಸಲಾಗುವುದು." ಎಂದು ಘೋಷಿಸಲಾಗಿದೆ. ಅದರಂತೆ, ಮೇಲೆ (13)ರಲ್ಲಿ ಓದಲಾದ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಇವರು ದಿನಾಂಕ: 26.09.2013ರ ಇ–ಮೇಲ್‌ರನ್ವಯ ತಾಲ್ಲೂಕು ಮಟ್ಟದವರೆಗೆ ವೀಡಿಯೋ ಕಾನ್ಫರೆನ್ಸಿಂಗ್ ಸೌಲಭ್ಯವನ್ನು ರೂ. 11 (ಹನ್ನೊಂದು) ಕೋಟಿಗಳ ವೆಚ್ಚದಲ್ಲಿ ವಿಸ್ತರಿಸಲು ಪ್ರಸ್ತಾಪಿಸಿರುತ್ತಾರೆ. ಯೋಜನಾ ಇಲಾಖೆಯ ದಿನಾಂಕ: 03.04.2010ರ ಆದೇಶ ಸಂ: ಪಿಡಿ 5 ಐಎಮ್‌ಎಮ್ 2010ರನ್ವಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಇವರ ಈ ಪ್ರಸ್ತಾವನೆ ಮುಂದುವರೆದ ಯೋಜನೆಯಾದ KSWAN ಯೋಜನೆಯ ಹೆಚ್ಚುವರಿ ಅಂಶ (additional component) ವಾಗಿದೆ. ದಿನಾಂಕ: 03.04.2010ರ ಸದರಿ ಆದೇಶದನ್ವಯ ಈ ಪ್ರಸ್ತಾವನೆಗೆ ಸಂಬಂಧಿಸಿದಂತೆ ಆರ್ಥಿಕ ಇಲಾಖೆ ಮತ್ತು ಯೋಜನಾ ಇಲಾಖೆಗಳ ಸಹಮತಿಯನ್ನು ಪಡೆದು ಅದನ್ನು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿನ ಅಧಿಕಾರಯುತ ಸಮಿತಿಯ ಮುಂದೆ ಅನುಮೋದನೆಗಾಗಿ ಮಂಡಿಸಲಾಯಿತು. ಆ ಸಮಿತಿಯು ದಿನಾಂಕ: 22.11.2013ರಂದು ನಡೆದ ತನ್ನ ಸಭೆಯಲ್ಲಿ ಸದರಿ ಪ್ರಸ್ತಾವನೆಯನ್ನು ಪರಿಗಣಿಸಿ ಅದಕ್ಕೆ ಅನುಮೋದನೆ ನೀಡಿತು. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ(ಇ–ಆಡಳಿತ) ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 23.08.2013ರಂದು ನಡೆದ ತನ್ನ ಸಭೆಯಲ್ಲಿ ಸದರಿ ಪ್ರಸ್ತಾವನೆಯನ್ನು ತಾಂತ್ರಿಕ ಸಲಹಾ ಸಮಿತಿ (Technical Advisory Panel) ಅನುಮೋದಿಸಿರುತ್ತದೆ. ಅಂತೆಯೇ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಪಿಆರ್‌ಜೆ 2013 ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2013**

4. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ಗೆ ಸಂಬಂಧಿಸಿದ ಮುಂದುವರೆದ ಯೋಜನೆಯಾದ ಕರ್ನಾಟಕ ರಾಜ್ಯ ವಿಸ್ತೃತ ಜಾಲ ಯೋಜನೆ (KSWAN) ಯ ಹೆಚ್ಚುವರಿ ಅಂಶ (additional component)ವಾಗಿ ತಾಲ್ಲೂಕು ಮಟ್ಟದವರೆಗೆ ವೀಡಿಯೋ ಕಾನ್ಫರೆನ್ಸಿಂಗ್ ಸೌಲಭ್ಯವನ್ನು ರೂ. 11 (ಹನ್ನೊಂದು) ಕೋಟಿಗಳ ವೆಚ್ಚದಲ್ಲಿ ವಿಸ್ತರಿಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಿದೆ.

5. ಸದರಿ ಮೊತ್ತವನ್ನು ಅನುದಾನದ ಬಿಲ್ಲು / ಸ್ವೀಕರ್ತನ ರಸೀದಿಯಲ್ಲಿ ಡ್ರಾ ಮಾಡಲು ಮತ್ತು ಈ ಬಿಲ್ಲನ್ನು ಸಿಆಸುಇ (ಇ–ಆಡಳಿತ)ಯ ಬಡವಾಡೆ ಅಧಿಕಾರಿಯು ದೃಢೀಕರಿಸಲು ಅನುಮತಿ ನೀಡಿದೆ.

6. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "3451–00–090–2–04–059 ವಿದ್ಯುನ್ಮಾನ ಆಡಳಿತ ಯೋಜನೆ ಇತರೆ ವೆಚ್ಚಗಳು(ಯೋಜನೆ)" ಅಡಿಯಲ್ಲಿ ಆಯವ್ಯಯದಲ್ಲಿ ಲಭ್ಯವಿರುವ ಅನುದಾನದಿಂದ ಭರಿಸತಕ್ಕದ್ದು.

7. ಆರ್ಥಿಕ ಇಲಾಖೆ ದಿನಾಂಕ 08.11.2013ರ ಟಿಪ್ಪಣಿ ಸಂಖ್ಯೆ: ಆಇ967 ವೆಚ್ಚ-12/2013 ಟಿಪ್ಪಣಿಯನ್ವಯ ನೀಡಿದ ಸಹಮತಿಯಂತೆ ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ದಿನಾಂಕ: 31.10.2013ರ ಟಿಪ್ಪಣಿ ಸಂ: ಪಿಡಿ 61 ಪಿಎಫ್ಒ 2013ರನ್ವಯ ನೀಡಿದ ಸಹಮತಿಯಂತೆ ಮತ್ತು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿನ ಅಧಿಕಾರಯುತ ಸಮಿತಿಯ, ಮೇಲೆ (15)ರಲ್ಲಿ ಓದಲಾದ, ದಿನಾಂಕ: 22.11.2013ರಂದು ನಡೆದ ಸಭೆಯ ನಡವಳಿಯನ್ವಯ ನೀಡಿದ ಅನುಮೋದನೆಯಂತೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವೈ. ಸುಶೀಲ**

ಪೀಠಾಧಿಕಾರಿ-2

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)

**P.R. 231**

**SC-700**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕದ ನಾಗರೀಕರಿಗೆ ಯಾವಾಗ ಬೇಕಾದರೂ, ಎಲ್ಲಿಯಾದರೂ ಮತ್ತು ಯಾವುದೇ ಉಪಕರಣದ {Any-time, Any-where and Any-How (any device)} ಮೂಲಕ ಸೇವೆಗಳನ್ನು ನೀಡಲು ಏಕೀಕೃತ ಮೊಬೈಲ್ ಸೇವೆ ನೀಡುವ ವೇದಿಕೆಯನ್ನು (Unified Mobile Service Delivery Platform) ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ: 31.03.2012ರ ಸರ್ಕಾರಿ ಆದೇಶ ಸಂ: ಸಿಆಸುಇ 1 ಎಸಿಎ 2011
2. ದಿನಾಂಕ: 11.01.2013ರ ಸರ್ಕಾರಿ ಆದೇಶ ಸಂ: ಸಿಆಸುಇ 10 ಎಸಿಎ 2012

**ಪ್ರಸ್ತಾವನೆ :**

1. 2011-12ನೇ ಸಾಲಿನ ಒಂದು ಬಾರಿಯ ಹೆಚ್ಚುವರಿ ಕೇಂದ್ರ ಸಹಾಯ {One Time Additional Central Assistance(OTACA)}ದಡಿ ಮೊಬೈಲ್ ಆಡಳಿತ ಯೋಜನೆಯನ್ನು ರೂ. 10.00 (ಹತ್ತು) ಕೋಟಿಯ ವೆಚ್ಚದಲ್ಲಿ ಜಾರಿಗೊಳಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ: 31.03.2012ರ ಸರ್ಕಾರಿ ಆದೇಶ ಸಂ: ಸಿಆಸುಇ 1 ಎಸಿಎ 2011ದನ್ವಯ ಮಂಜೂರಾತಿಯನ್ನು ನೀಡಲಾಗಿದೆ. ಮುಂದುವರೆದು, ಏಕೀಕೃತ ಮೊಬೈಲ್ ಸೇವೆ ನೀಡುವ ವೇದಿಕೆಯನ್ನು ಕಡ್ಡಾಯವಾಗಿ ಬಳಸತಕ್ಕದ್ದೆಂದು ಮೇಲೆ (2)ರಲ್ಲಿ ಓದಲಾದ ದಿನಾಂಕ: 11.01.2013ರ ಸರ್ಕಾರಿ ಆದೇಶದನ್ವಯ ಆದೇಶಿಸಲಾಗಿದೆ.

2. ತದನಂತರ, ಟೆಂಡರ್ ಪ್ರಕ್ರಿಯೆಯ ನಂತರ ಈ ಯೋಜನೆಯ ವೆಚ್ಚ ಸುಮಾರು ರೂ. 20.65 ಕೋಟಿ ಆಗಲಿದೆಯೆಂದು ಕಂಡು ಬಂದಿದೆ. ಇದಕ್ಕೆ ಸಂಬಂಧಿಸಿದ ಆರ್ಥಿಕ ತೊಡಕುಗಳನ್ನು ಅನುಬಂಧದಲ್ಲಿ ನಮೂದಿಸಿದೆ. ಈ ಯೋಜನೆಗಾಗಿ ರೂ. 20.65 ಕೋಟಿಯ ಪರಿಷ್ಕೃತ ವೆಚ್ಚವನ್ನು ಮಂಜೂರು ಮಾಡುವ ವಿಷಯವನ್ನು ಸರ್ಕಾರ ಪರಿಶೀಲಿಸಿದೆ. ಈ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಯೋಜನೆ 2013 ದಿನಾಂಕ: 13ನೇ ಡಿಸೆಂಬರ್ 2013

3. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಮೇಲೆ (1)ರಲ್ಲಿ ಓದಲಾದ ದಿನಾಂಕ: 31.03.2012ರ ಸರ್ಕಾರಿ ಆದೇಶವನ್ನು ಮಾರ್ಪಡಿಸುತ್ತಾ, ಅನುಬಂಧದಲ್ಲಿ ನಮೂದಿಸಿದ ವಿವರಗಳಂತೆ ಪರಿಷ್ಕರಿಸಿದ ರೂ. 20.65 ಕೋಟಿಗಳ (ರೂ. ಇಪ್ಪತ್ತು ಕೋಟಿ ಅರ್ವತ್ತೈದು ಲಕ್ಷಗಳ) ವೆಚ್ಚದಲ್ಲಿ ಮೊಬೈಲ್ ಸೇವೆ ನೀಡುವ ವೇದಿಕೆಯನ್ನು (Mobile Service Delivery Platform) ಸ್ಥಾಪಿಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

4. ಪಟ್ಟಿ ಮಾಡಿದ ಎಲ್ಲಾ ಸರ್ಕಾರಿ ಸೇವೆಗಳನ್ನು (all listed Government services) ಮೊಬೈಲ್ ವೇದಿಕೆ/ಇ-ಆಡಳಿತ ವೇದಿಕೆ/ಬೆಂಗಳೂರುಒನ್/ಕರ್ನಾಟಕಒನ್/ ಸಾಮಾನ್ಯ ಸೇವಾ ಕೇಂದ್ರಗಳು ಅಥವಾ ರಾಜ್ಯ ಸರ್ಕಾರ ಸ್ಥಾಪಿಸಬಹುದಾದ ಇತರೆ ಯಾವುದೇ ಇ-ಆಡಳಿತ ವೇದಿಕೆಯ ಮೂಲಕ ನೀಡುವುದನ್ನು ಈ ಮೂಲಕ ಕಡ್ಡಾಯಗೊಳಿಸಲಾಗಿದೆ.

5. ದಿನಾಂಕ: 03.09.2013ರ ಟಿಪ್ಪಣಿ ಸಂಖ್ಯೆ: ಆಇ 802 ವೆಚ್ಚ-12/2013ರನ್ವಯ ಆರ್ಥಿಕ ಇಲಾಖೆ ನೀಡಿದ ಸಹಮತಿಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವೈ. ಸುಶೀಲ**

ಪೀಠಾಧಿಕಾರಿ-2

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)

**P.R. 232**

**SC-700**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತವನ್ನು ಸ್ಥಾಪಿಸಲು ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಪತ್ರದ ಸಂಖ್ಯೆ : ಹಿಂವಕ 233 ಬಿಸಿಎ 2013, ದಿನಾಂಕ : 23-08-2013 ಮತ್ತು 03-09-2013.
2. ವ್ಯವಸ್ಥಾಪಕ ನಿರ್ದೇಶಕರು, ಡಿಬಿಸಿಡಿಸಿ (ನಿ), ಬೆಂಗಳೂರು ರವರ ಪತ್ರದ ಸಂಖ್ಯೆ : ದೇಹಿನಿ/ಮಪಾವಿ/ವಿಕಅನಿ.ಸ್ಥಾಪನೆ/ಸಿಆರ್-08/13-14, ದಿನಾಂಕ : 19-10-2014.

**ಪ್ರಸ್ತಾವನೆ :**

2013-14ನೇ ಸಾಲಿನ ಸನ್ಮಾನ್ಯ ಮುಖ್ಯಮಂತ್ರಿಯವರ ದಿನಾಂಕ : 12-07-2013ರ ಆಯವ್ಯಯ ಭಾಷಣದ ಕಂಡಿಕೆ 280ರಲ್ಲಿ ಶಿಲ್ಪಕಲೆ, ಲೋಹ ಮತ್ತು ಮರಗೆಲಸಗಳಲ್ಲಿ ತೊಡಗಿರುವ ಕುಶಲಕರ್ಮಿಗಳಿಗೆ ಹಣಕಾಸಿನ ಸಹಾಯ ನೀಡುವ ಸಲುವಾಗಿ ವಿಶ್ವಕರ್ಮ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಲಾಗುವುದು. ಇದಕ್ಕಾಗಿ ಆರಂಭಿಕವಾಗಿ ರೂ. 5.00 ಕೋಟಿಗಳನ್ನು ಒದಗಿಸಲಾಗುವುದು ಎಂದು ಘೋಷಿಸಲಾಗಿದೆ.

ಮೇಲೆ ಓದಲಾದ (1)ರ ಸರ್ಕಾರದ ಪತ್ರಗಳಲ್ಲಿ ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತದ ಸ್ಥಾಪನೆಗೆ ಬೇಕಾದ ಎಲ್ಲಾ ಕ್ರಮಗಳನ್ನು ಜರುಗಿಸಲು ಪ್ರಾರಂಭಿಕವಾಗಿ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರನ್ನು ತಾತ್ಕಾಲಿಕವಾಗಿ ವಿಶ್ವಕರ್ಮ ಅಭಿವೃದ್ಧಿ ನಿಗಮ ಸ್ಥಾಪನೆಯಾಗುವ ತನಕ ಈ ಹುದ್ದೆಯ ಹೆಚ್ಚುವರಿ ಕಾರ್ಯಭಾರವನ್ನು ವಹಿಸಿಕೊಳ್ಳುವಂತೆ ಸೂಚಿಸಲಾಗಿದೆ. ವಿಶ್ವಕರ್ಮ ಅಭಿವೃದ್ಧಿ ನಿಗಮದ ಸ್ಥಾಪನೆಗೆ ಹಂತ ಹಂತವಾಗಿ ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ನಿಗಮದ ವ್ಯವಸ್ಥಾಪಕ ನಿರ್ದೇಶಕರಿಗೆ ಸೂಚಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ವಿಶ್ವಕರ್ಮ ಅಭಿವೃದ್ಧಿ ಸಮುದಾಯಗಳ ಅಭಿವೃದ್ಧಿ ನಿಗಮ ಸ್ಥಾಪಿಸುವ ಕುರಿತಂತೆ ಉದ್ದೇಶಿತ ವಿಶ್ವಕರ್ಮ ಅಭಿವೃದ್ಧಿ ನಿಗಮದ ರೂಪುರೇಷೆಗಳು, ಕಾರ್ಯಗಳು, ಸ್ವರೂಪ ಕಾರ್ಯಕ್ರಮಗಳಿಗೆ ಅನುಗುಣವಾಗಿ Memorandum of Association and Articles of Association ಅನ್ನು ತಯಾರಿಸಿ ಸರ್ಕಾರಕ್ಕೆ ಪೂರ್ಣ ಪ್ರಮಾಣದ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹಿಂವಕ 233 ಬಿಸಿಎ 2013, ಬೆಂಗಳೂರು ದಿನಾಂಕ : 03-02-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತವನ್ನು ಸ್ಥಾಪಿಸಲು ಈ ಕೆಳಕಂಡ ಷರತ್ತಿಗಳಿಗೊಳ್ಳಪಟ್ಟು ಸರ್ಕಾರದ ಅನುಮೋದನೆ ನೀಡಿದೆ.

1. "Karnataka Vishwakarma Communities Development Corporation LImited" (ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತ)ವನ್ನು ಕಂಪನಿ ಕಾಯ್ದೆ 1956ರ ಅಡಿಯಲ್ಲಿ ನೊಂದಾಯಿಸಿ ಸ್ಥಾಪಿಸತಕ್ಕದ್ದು.
2. ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿರುವಂತೆ ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತದ Memorandum of Association and Articles of Association ಗಳನ್ನು ಅನುಮೋದಿಸಿದೆ. ಅದರಂತೆ ಕ್ರಮ ಕೈಗೊಳ್ಳತಕ್ಕದ್ದು.
3. ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತವನ್ನು ಕಂಪನಿ ಕಾಯ್ದೆ 1956ರಡಿಯಲ್ಲಿ ಕಂಪನಿಯಾಗಿ ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರಲ್ಲಿ ನೋಂದಾಯಿಸತಕ್ಕದ್ದು.
4. ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತವನ್ನು ಕಂಪನಿ ಕಾಯ್ದೆ 1956ರ ಅಡಿಯಲ್ಲಿ ಕಂಪನಿಯಾಗಿ ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರಲ್ಲಿ ನೋಂದಾಯಿಸಲು ಅವಶ್ಯವಿರುವ ಎಲ್ಲಾ ಕೆಲಸಗಳನ್ನು ನಿರ್ವಹಿಸಲು ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಇವರಿಗೆ ಅಧಿಕಾರ ನೀಡಿದೆ.
5. ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತದ ಸ್ಥಾಪನೆಗೆ ಸಂಬಂಧಿಸಿದಂತೆ ಪ್ರಾರಂಭಿಕ ಖರ್ಚುಗಳಾದ ರಿಜಿಸ್ಟ್ರೇಷನ್ ಫೀ, ಫೈಲಿಂಗ್ ಫೀ, ಪ್ರಾರಂಭಿಕ ಷೇರುಗಳ ಖರೀದಿ ಮೊದಲಾದ ವೆಚ್ಚಗಳನ್ನು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಿಂದ ಭರಿಸಿ ನಂತರ ಕರ್ನಾಟಕ ವಿಶ್ವಕರ್ಮ ಸಮುದಾಗಳ ಅಭಿವೃದ್ಧಿ ನಿಗಮ ನಿಯಮಿತದಿಂದ ಪುನರ್ ಭರ್ತಿಮಾಡಿಕೊಳ್ಳತಕ್ಕದ್ದು ; ಹಾಗೂ
6. ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರೊಡನೆ ನೋಂದಾಯಿಸುವಾಗ ಹಾಲಿ ಬದಲಾವಣೆಗೊಳ್ಳುತ್ತಿರುವ ಕಂಪನಿ ಕಾಯ್ದೆ 1956ರ ಅಡಿಯಲ್ಲಿ ಆಗುವ ಬದಲಾವಣೆಗಳಿಗೆ ಅನುಗುಣವಾಗಿ ಹಾಗೂ ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರು ಸೂಚಿಸಬಹುದಾದ ಬದಲಾಣೆಗಳನ್ನು ಅನುಮೋದಿಸಿರುವ Memorandum of Association and Articles of Association ಗಳಲ್ಲಿ ಆಗಿಂದಾಗ್ಗೆ ಅಳವಡಿಸಲು ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಇವರಿಗೆ ಅಧಿಕಾರ ನೀಡಲು ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 29 ವೆಚ್ಚ-3/2004, ದಿನಾಂಕ : 22-01-2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್. ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ : ಹಿಂವಕ 233 ಬಿಸಿಎ 2013, ಬೆಂಗಳೂರು, ದಿನಾಂಕ : 03-02-2014ಕ್ಕೆ**

**ಅನುಬಂಧ**

**MEMORANDUM OF ASSOCIATION AND ARTICLES OF ASSOCIATION OF**

**Karnataka Vishwakarma Communities Development Corporation Limited**

Companies Act, 1956

Memorandum of Association of

Karnataka Vishwakarma--Communities Development

Corporation Limited

(Company Limited by shares) ,

I. The name of the company is "KARNATAKA VISHWAKARMA COMMUNITIES DEVELOPMENT CORPORATION LIMITED"

II. The Registered office of the company will be situated in the state of Karnataka.

III. The Objects for which the company is established are :-

A) Main objects to be pursued on incorporation of the Company.

1. To carry on the business of extending financial and technical assistance to any viable project under Business, Service, Transport, Industries, Agriculture and allied activities to Vishwakarma Communities in Karnataka for their economic development and to promote avenues for self employment.
2. To extend Loan/subsidy to the students belonging to Vishwakarma Communities, for pursuing professional/technical courses in India & abroad and to advance Loan/subsidy to start the profession of Doctors, Engineers; Lawyers, Architects, Chartered Accountants or such other useful professions.
3. To extend assistance to the artisans and handicraft persons to secure their traditional art & craft and to provide training to upgrade their existing skills in the latest technicalogical inputs such as computers, design developments, other 'storage devices etc., and to extend assistance to promote marketing and exporting the products manufactured by-the artisans, establish marketing linkage, providing opportunities to. participate in Trade fairs & exhibitions.
4. To extend irrigation facility to the lands owned by small and marginal farmers among Vishwakarma Community under individual and community irrigation scheme, lift irrigation scheme and to extend support for acquiring dry/wet: land to take up agriculture activities.
5. To assist the unemployed entrepreneurs belonging to Vishwakarma Communities is in Karnataka to start their own business or vocation or industry under self-employment programme and also to impart industrial and technical training and. assistance to them for setting up their business profession with the support of the share capital I grants funded' by Government of India and Government of Karnataka .and by availing credit facilities from specialized financial institutions established by the Government of India.

B) Objects incidental Or ancillary to The Attainment of the Main Objects.

1. To undertake or aid production or supply of materials and articles for construction of buildings for putting up Dairy farms and Agricultural implements.
2. To advance loans for organzing and developing poultry and Dairy Farming and intensive agricultural operations to start and develop cottage industries, workshops and work centers.
3. To act as guarantors for or land seed/ marginal money required for obtaining advances, .and loans that may be made by other financial or developmental or industrial institutions or Government to the members of the Vishwakarma Communities.
4. To evolve scheme for Health insurance far artisans engaged in Vishwakarma professions, in the same lines as Yashawini, Farmers Insurance Scheme etc : and provide old· age pension to the Vishwakarma Communities and- pension to physically handicapped persons of the community. .
5. To Provide improved tool kits to the artisans carrying out any of the 5 professions pursuing by the community.
6. To receive loans, advances, grants or other moneys fron the Central Government, State Government, Local Bodies, Banks, Companies, Corporation, Co-Operative societies, Karnataka Khadhi and Village Industries Commission, Trusts or individuals with or without interest in order to carry out the objects of the company.
7. To lend or advances money either upon or without security and borrow or raise secure-·the payment of money in such manner as the Board of Directors may deem fit, and in particular by the issue of Debentures,· Debenture' stock bands, Deposits, obligation and securities .of all kinds but the Corporation will not carry' an banking business within the meaning of Banking Regulation Act, 1949.
8. To establish ITI &. Technical Training Centers for the Skill/ Professional development of Vishwakarma Communities.
9. To pay all costs, charges and expenses incurred or sustained in or about the promotion and-establishment of the Corporation which the Board may consider to be on the nature of preliminary expenses including therein the cost advertising, printing and expenses attendant upon the formation of branches and agencies.
10. To construct, acquire, maintain and alter any buildings, or works necessary or convenient for the purpose of the company.
11. To take over, improve, and reconstruct any Government Building with .or without consideration for setting up any office, workshed or store in connection with any scheme or project approved by the Board.
12. To receive, take over, improve or develop any land belonging to the Government of Karnataka, or the Government of India; Local Body or Statutory Body for Agricultural, Fishery or Industrial development,directly' or in collaboration with Government, Local Body, Company or any member belonging to Vishwakarma Community or group of' such persons whether registered under law as firm or society or company or not.
13. To set up, run and manage. work production' centers for manufactures of goods required for attaining the main objects of the company.
14. To make, draw, accept, endorse, discount, execute, issue and negotiate cheques, bills of exchanges, promissory notes, debentures and negotiable or transferable instruments .

15. To employ brokers, commission agents and under-writers and to provide for remuneration of such persons for their services for promotion. of the business of the company in accordance with the provisions of the Companies Act. 1956.
16. To promote and operate schemes for the benefit of Vishwakarma Communities and for that purpose to prepare- or cause to be prepared feasibility reports, blue prints,' Statistics and other information.
17. To employ and remunerate experts to investigate and examine the condition, prospects, value and circumstances of any scheme for the welfare of Vishwakarma Communities and generally of any assets, property and rights of any person belonging to Vishwakarma Communities and generally of any assets, property and rights of any person belonging to Vishwakarma Communities and/or group of such persons registered under law as Firm or Society or Company or not.
18. To enter into any partnership or arrangement for joint working with any other company, firm or person carrying on business with the same or similar objects of this Corporation.
19. To sell, improve, manage, develop,. exchange, lease) mortgage, enfranchise, dispose of, turn to account and otherwise deal with all or any part of the property and rights of the Corporation.
20. To accept stock of shares, in or the debentures, mortgage debentures or other securities of any other Company in payment for any services rendered or for any sale made to debt owing from any such Company.
21. To acquire and undertake the whole or any part of the business, property and ·liabilities of any person or Company carrying on any business which the company is authorised to carry on or possessed of property suitable for the purpose of this Company.
22. To enter into any arrangements with Government of India Government· of Karnataka .. or any other Government, CorporationCompany, Social authority or Statutory Body for the purpose of carrying out the objects of the Corporation or furthering its interests and to obtain from such Government or authority, persons or body any charters, subsidies, concessions, privileges or immunities which the Board of Directors may think it desirable to obtain and exercise and Company with such arrangements, rights, privileges and concessions.
23. To invest the moneys of the Corporation, not immediately required, in such matter other than in the share of this Company as from time to time may be determined.
24. To create any depreciation fund, reserve fund, sinking fund, insurance fund or any special or other fund whether for depreciation or for repairing, replacing, improving expending or maintaining any of the property of the Corporation or for special dividends or for redemption of debentures or redeemable shares or for any other purpose whatsoever, and to transfer any such fund or part thereof to any of the other funds therein mentioned.
25. To arrange for the supply of the raw materials required by any member of Vishwakarma Communities or group of such persons whether registered under law as Firm, Society or Company or not for taking up any productive. programme.

**C. Other Objects not .included in A and B above.**

1. To undertake the marketing of the produces, products and material belonging to, legally collected or produced by any member of Vishwakarmas or group of such persons whether registered under law as Firm, Society or Company or not.
2. To promote, finance or conduct directly or in collaboration with any member of Vishwakarma Communities or firm or. Society or Company of such person, hostels, boarding and lodging houses, hotels and restaurants.
3. To undertake or act as agency for implementing any schemes of Government of Karnataka, Government of India, Karnataka Khadi and Village industries Board, Khadi and Village Industries Commission or any agency approved by Government of Karnataka for the benefit of Vishwakarma Communities
4. To start 'and carry on. production of machine tools and equipment required for small-scale industries.
5. To extend micro credit facilities to promote Self Help Groups at nominal rate of interest, provide magin or seed capital and subsidy under various schemes .
6. To assist for acquiring or constriction of living-cum-work shed to develop self employment by Vishwakarma Communities.
7. To promote the activities such as Carpentry, Black smithy, Gold smithy etc., by Vishwakarma Communities.

IV. The liability of the members is limited.

IV. The Authorised Share Capital of the Company is Rs. 5,00,00,000/- (Rupees Five crore only) divided into 50,000/- ( Fifty Thousand) Equity Shares of Rs 1000/- (Rupees One Thousand only) each.

We, the several persons; whose names and addresses are subscribed below, are desirous of being formed into a Company in pursuance of this Memorandum of Association and we respectively agree to take the number of shares in the capital of the Company set opposite to our names.

There were representations from officers of auxiliary police units to improve their service conditions such as recruitment method, promotion, seniority and also to consider them for inclusion in the eligibility list for promotion to IPS as shown in the year 1991. The committee headed by Sri. P.S. Ramanujam, the then A.D.G.P, which was appointed to look in to these requests, submitted its report to the Government on 22.06.2000. The said committee report was examined by the Committee constituted for the said purpose headed by the Chairmanship of Additional Chief Secretary to the Government and a decision was taken that there was no necessity for inclusion of senior officers for being considered for promotion to IPS. However, when the number of eligible officers was less than the available vacancies, on re- consideration of the entire matter relating to promotion of officers of non-civil police units of the IPS, the Government took a view that the shortage of civil police officers faced by the Government covered by including the officers of non- civil police unit as recommended by Dr. P.S. Ramanujam Committee in the year 2000. Accordingly, the Government decided to declare the auxiliary police units as equivalent to Principal Police Service, i.e., Civil Service for the purpose of promotion along with officers of the units. Thus, the Government Order dated 01.10.2010 came to be issued. But this order dated 01.10.2010 was withdrawn in an Order dated: 21.07.2011 considering the opinion of the Home Department.

The Central Administrative Tribunal Bangalore Bench in its Order dated: 07.12.2011, read at (5) above held that there is only one police force in Karnataka. Being aggrieved by the said order, several writ petitions were filed before the High Court of Karnataka. The Hon'ble Court pronounced the judgment on 25.04.2013 which was received in the Government on 19.07.2013, read at (6) above, in which it was ordered, among other things, as follows:

'71…

(iv) We hereby direct the authorities to constitute a broad based expert committee to resolve these disputes at the earliest.

(v) After constitution of such committee, the committee shall give sufficient opportunity to the varying fractions and resolve the dispute and submit their report to the Government within a period of 6 months from the date of receipt of a copy of this order.

(vi) On submission of the said report, the Government shall take decision regarding equivalence within 2 months there from.

(vii) It is made clear the Government decision should contain the reasons either for granting equivalence or refusing to grant equivalence so that the aggrieved person could agitate his rights before this Court.

Accordingly, the Government have decided to constitute a broad based expert committee and hence the following order.

**GOVERNMENT ORDER NO. DPAR 155 SPS 2013, BANGALORE, DATED: 22.11.2013.**

Having regard to the circumstances explained in the preamble, the expert committee with following members is constituted to resolve the disputes as directed by the Hon 'ble High Court of Karnataka in Judgment dated: 25.04.2013 in W.P. No: 3269/2012 c/w other W.P.s:

| | | |
|---|---|---|
| Sri A.R. Infant, IPS (RR-77), DGP (Rtd) | - | Chairman |
| Sri M. Lakshman, IPS (SPS-77), IGP (Rtd) | - | Member |
| Sri Ashit Mohan Prasad, IPS (RR-85), ADGP, Intelligence. | - | Convener |

The Committee will submit a detailed report to the Government within a period of two months.

BY ORDER AND IN THE NAME OF THE GOVERNOR OF KARNATAKA

**J.D. Madhuchandra Tejaswi,**
Under Secretary to Government,
DP & AR (ServiceS-IV)

**PR-235**

## PERSONNEL AND ADMINISTRATIVE REFORMS SECRETARIAT

### ADDENDUM

### NO.DPAR 203 HGG 2013 Bangalore, dated: 30-01-2014

In the guidelines governing the extension of State Hospitality to the visiting dignitaries appended to the Government Order No: DPAR 554 HGG 2005, dt: 22-04-2006 & Addendum No: DPAR 14 HGG 2010, dt:31-03-20 1 0, under the heading when they visit the State on official duty State Guests after the words Election Commissioners of other States in India appearing in Sl. No. 24 (v) at para 3 (a), the following shall be inserted.

**24 (W) Vice Chairman and Members of National Disaster Management Authority, Government of India, New Delhi.**

BY ORDER AND IN THE NAME OF THE GOVERNOR OF KARNATAKA

**Muniraju,**
Under Secretary to Government,
DP & AR (STATE PROTOCOL)

**PR-236**

**SC - 100**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಮತ್ತು ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಗಳಿಂದ ಎನ್.ಸಿ.ಡಿ.ಸಿ.ಗೆ ಪಾವತಿಸಲು ಬಾಕಿ ಇರುವ ಸಾಲ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 66 ಸಿಪಿಎಫ್ 2001 ದಿನಾಂಕ:31-03-2011.
2) ಸರ್ಕಾರದ ಆದೇಶ ಸಂಖ್ಯೆ: ಸಮಾತೂ 223 ಸಸಕಾ 2002 ದಿನಾಂಕ:26-2-2003.
3) ಸರ್ಕಾರದ ಆದೇಶ ಸಂಖ್ಯೆ ವಾಕೈ 01 ಸಸಕಾ 2011 ದಿನಾಂಕ: 24-9-2013.
4) ನಿರ್ದೇಶಕರು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ ಋಣ ನಿರ್ವಹಣೆ ಇವರ ಪತ್ರ ಸಂಖ್ಯೆ: ಆಋನಿ(1)5/2010-11, ದಿನಾಂಕ: 24-10-2013.

**ಪ್ರಸ್ತಾವನೆ :**

ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಮತ್ತು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಈ 3 ಸಹಕಾರಿ ಸಕ್ಕರೆ ಕಾರ್ಖಾನೆಗಳು ಎನ್.ಸಿ.ಡಿ.ಸಿ.ಗೆ ಸುಸ್ತಿಯಾಗಿದ್ದ ಸಾಲವನ್ನು, ಎನ್.ಸಿ.ಡಿ.ಸಿ.ಯು ಪ್ರಸ್ತಾವಿಸಿದ್ದ ಏಕಕಾಲಿಕ ತೀರುವಳಿ ಯೋಜನೆಯನ್ವಯ ಪಾವತಿಸಲು ನಿರ್ಧರಿಸಿ ಸರ್ಕಾರವು ಒಟ್ಟು ಮೊತ್ತ ರೂ.4662.61 ಲಕ್ಷಗಳನ್ನು 3 ಕಂತುಗಳಲ್ಲಿ ಮರುಪಾವತಿಸುವ ಷರತ್ತಿನೊಂದಿಗೆ ಮಂಜೂರು ಮಾಡಿ ಮೇಲೆ ಓದಲಾದ (1)ರ ಆದೇಶದ ಮೂಲಕ ಬಿಡುಗಡೆ ಮಾಡಲಾಗಿದೆ.

ಮೇಲೆ ತಿಳಿಸಿದ 3 ಸಹಕಾರಿ ಸಕ್ಕರೆ ಕಾರ್ಖಾನೆಗಳ ಪೈಕಿ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಮೇಲೆ ಓದಲಾದ (1)ರ ಆದೇಶದ ಮೂಲಕ ಬಿಡುಗಡೆ ಮಾಡಲಾಗಿದ್ದ ಮೊತ್ತಕ್ಕೆ ಹೊಂದಾಣಿಕೆ ವಿವರದೊಂದಿಗೆ ರೂ.17,48,73,625/-ಗಳನ್ನು ಸಾಲವೆಂದು ಮಂಜೂರು ಮಾಡಿ ಅದರ ಮರುಪಾವತಿಗೆ ಸಂಬಂಧಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2) ಆದೇಶದ ಮೂಲಕ ಹೊರಡಿಸಲಾಗಿರುತ್ತದೆ.

ಇನ್ನುಳಿದ ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಮತ್ತು ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಈ 2 ಸಹಕಾರಿ ಸಕ್ಕರೆ ಕಾರ್ಖಾನೆಗಳು ಅನುಕ್ರಮವಾಗಿ ಹೊಂದಿರುವ ಸಾಲದ ಮೊತ್ತ ರೂ.1799.05 ಲಕ್ಷಗಳು (ರೂಪಾಯಿ ಒಂದು ಸಾವಿರದ ಏಳು ನೂರ ತೊಂಬತ್ತೊಂಬತ್ತು ಲಕ್ಷಗಳು ಮತ್ತು ಐದು ಸಾವಿರ ಮಾತ್ರ) ಮತ್ತು ರೂ.1163.86 ಲಕ್ಷಗಳ (ರೂಪಾಯಿ ಒಂದು ಸಾವಿರದ ಒಂದು ನೂರ ಅರವತ್ತಮೂರು ಲಕ್ಷಗಳು ಮತ್ತು ಎಂಬತ್ತಾರು ಸಾವಿರ ಮಾತ್ರ) ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಿ ಮೇಲೆ ಓದಲಾದ (3)ರಲ್ಲಿ ಸರ್ಕಾರವು ಆದೇಶ ಹೊರಡಿಸಿರುತ್ತದೆ.

ಮೇಲೆ ಓದಲಾದ (4)ರಲ್ಲಿ ನಿರ್ದೇಶಕರು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ ಋಣ, ಇವರು ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆಯು 1994-95ನೇ ಸಾಲಿನಿಂದ 1998-99ನೇ ಸಾಲಿನವರೆಗೆ ಘಟಕದ ವಿಸ್ತರಣೆಯಿಂದಾಗಿ ನುರಿಸಿದ ಹೆಚ್ಚುವರಿ ಕಬ್ಬಿನ ತೆರಿಗೆ ರೂ.312.44 ಲಕ್ಷಗಳನ್ನು ಪಾವತಿಸಿದ್ದರಿಂದ ಸದರಿ ಮೊತ್ತವನ್ನು ಸರ್ಕಾರವು deferred loan ಎಂದು ಪರಿಗಣಿಸಿ ಬಡ್ಡಿ ರಹಿತ ಸಾಲವೆಂದು ಸರ್ಕಾರದ ಆದೇಶ ಸಂಖ್ಯೆ:ಸಿಐ 25 ಎಸ್‌ಜಿಎಫ್ 2000, ದಿನಾಂಕ: 25-1-2002ರಲ್ಲಿ ಆದೇಶ ಹೊರಡಿಸಿರುವುದರಿಂದ, ಉಲ್ಲೇಖ(3)ರ ಆದೇಶದಲ್ಲಿ ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆಯು ಸರ್ಕಾರಕ್ಕೆ ಮರುಪಾವತಿಸಬೇಕಾಗಿರುವ ಮೊತ್ತ ರೂ.1487/- ಲಕ್ಷಗಳೆಂದು ತಿದ್ದುಪಡಿ ಮಾಡಿ ಷರತ್ತು ಮತ್ತು ನಿಬಂಧನೆ ಹೊರಡಿಸುವಂತೆ ಕೋರಿರುತ್ತಾರೆ.

ಆದ್ದರಿಂದ, ಮೇಲೆ (3)ರ ಆದೇಶ ದಿನಾಂಕ: 24-9-2013ನ್ನು ಭಾಗಶ: ಮಾರ್ಪಡಿಸಿ ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಹಳ್ಳಿಖೇಡ್, ಬೀದರ್ ಜಿಲ್ಲೆ ಈ ಸಹಕಾರಿ ಸಕ್ಕರೆ ಕಾರ್ಖಾನೆಗೆ ಎನ್.ಸಿ.ಡಿ.ಸಿ.ಯಿಂದ ಮಂಜೂರು ಮಾಡಲಾಗಿರುವ ರೂ.1486.61 ಲಕ್ಷಗಳ (ರೂಪಾಯಿ ಒಂದು ಸಾವಿರದ ನಾಲ್ಕು ನೂರ ಎಂಬತ್ತಾರು ಲಕ್ಷಗಳು ಮತ್ತು ಅರವತ್ತೊಂದು ಸಾವಿರ ಮಾತ್ರ) ಸಾಲದ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಈ ಕೆಳಗಿನ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 91 ಸಸಕಾ 2013, ಬೆಂಗಳೂರು, ದಿನಾಂಕ: 05-02-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಿನಾಂಕ: 24-9-2013ರ ಸರ್ಕಾರದ ಆದೇಶ ಸಂಖ್ಯೆ ವಾಕೈ 01 ಸಸಕಾ 2013 ಅನ್ನು ಭಾಗಶ: ಮಾರ್ಪಡಿಸಿ ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಹಳ್ಳಿಖೇಡ್, ಬೀದರ್ ಜಿಲ್ಲೆ ಈ ಕಾರ್ಖಾನೆಗೆ ಎನ್.ಸಿ.ಡಿ.ಸಿ.ಯಿಂದ ಮಂಜೂರು ಮಾಡಲಾಗಿರುವ ರೂ. 1486.61/- ಲಕ್ಷಗಳ (ರೂಪಾಯಿ ಒಂದು ಸಾವಿರದ ನಾಲ್ಕು ನೂರ ಎಂಬತ್ತಾರು ಲಕ್ಷಗಳು ಮತ್ತು ಅರವತ್ತೊಂದು ಸಾವಿರ ಮಾತ್ರ) ಸಾಲವನ್ನು ಮರು ಪಾವತಿ ಮಾಡುವ ಸಲುವಾಗಿ ಷರತ್ತು ಮತ್ತು ನಿಬಂಧನೆಗಳನ್ನು ಈ ಆದೇಶದ ಅನುಬಂಧ (1)ರ ಪ್ರಕಾರ ವಿಧಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 313 ವೆಚ್ಚ-2/2011 ಮತ್ತು ದಿನಾಂಕ:11-09-2013ರ ಮೂಲಕ ನೀಡಿರುವ ಸಹಮತದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಪರಮೇಶ್ವರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ).

**ANNEXURE -I**

**Annexure to the G.O. No. CI 91 COF 2013 dated 05-02-2014**

Essential details of Loans sanctioned vide Government Orders

No. CMW 66 COF 2001 dated 31-03-2001 and CI 25 SGF 2000 dated 25-1-2002.

LOANS AND ADVANCES BY STATE GOVERNMENT

| | | |
|---|---|---|
| 1. Sanctioning Authority | Government of Karnataka | |
| 2. Sanction (G.O.No. and date) | 1) No CMW 66 COF 2001 dated 31.03.2001<br>2) No.CI 25 SGF 2000 dated 25.01.2002. | |
| 3. To whom sanctioned | Bidar Sahakari Sakkare Karkhane Niyamitha,<br>Hallikhed, Bidar District. | |
| 4. Amount sanctioned (in words and figures) | ₹ 1799.05 (Rupees one thousand seven hundred ninety nine lakhs and five thousand only ) | |
| 4A . Amount. treated as deferred loan | ₹ 312.44 (three hundred and twelve lakhs and forty four thousand only) | |
| 5. Sanction valid upto | Not applicable | |
| 6. Purpose of the Loan | Settlement of overdues to N.C.D.C. | |
| 7. Payable in cash or adjustment | Cash/cheque | |
| 8. Plan or Non-plan | Plan | |
| 9. Head of Account to which the loan is debitable | 6860-04-101-0-12-395 | |
| 10. Progressive amount of loan sanctioned to date in the financial year. | G.O.No. and date | Amount (₹ in lakhs) |
| | 1) No. CI 66 COF 2001 dated 31:03.2001 | 1799.05 |
| | 2) No.CI 25 SGF 2000 Dated 25.1.2002 | 312.44 (-) |
| | Total | 1486.61 |
| 11. Period of Loan | 10 years | |
| 12. Moratorium towards repayment, if any | - Nil - | |
| 13. Date and year from which repayment is to commence | Repayment shall be from the next Financial Year i.e., 1.4.2001<br>for G.O. dated 31.3.2001, 1.4.2002<br>for G.O. dated 27.6.2001 and<br>G.O. dated 25.9.2001 and 1.4.2003<br>for G.O. dated 3.4.2002. | |
| 14. Mode of repayment | By cheque or DD | |
| 15. Rate of Interest | | |
| a) Effective (if installment received on or before due date) | | |
| b) Normal rate (if installment not received on or before due date) | 16% | |
| c) Penal rate of interest (on overdue installment for the period of default) | 4% | |
| d) Mode of recovery of interest | By Cash or DD | |
| 16. Adjustment of overdue loans, if any | - - - | |
| 17. Authority who countersigns the payee's receipt | Commissioner for Cane Development and Director of Sugar, Bangalore | |
| 18. Authority who maintains loan ledger and watches recovery | Commissioner for Cane Development and Director of Sugar, Bangalore | |
| 19. Authority responsible for reconciliation and monitoring of loan | Commissioner for Cane Development and Director of Sugar, Bangalore | |
| 20. Authority to whom utilisation certificates are to be given | Commissioner for Cane Development and Director of Sugar, Bangalore | |
| 21. Authority who should furnish estimate of recovery of loan and interest for inclusion in the budget estimates | Commissioner for Cane Development and Director of Sugar, Bangalore | |

**T. Parameswarappa,**
Under Secretary to Government
Commerce and Industries Department
(Co-operative Sugar)

**PR - 249**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಜಿಎಡಿ 7 ಡಿಎಸ್‌ಡಬ್ಲ್ಯೂ 69, ದಿ: 19–10–1972
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 215 ಎಲ್‌ಎಂಎಕ್ಸ್ 86, ದಿ:20–10–1990
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 667 ಎಲ್‌ಎಂಎಕ್ಸ್ 98, ದಿ: 22–10–1999
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 1 ಈಸಪ 2010, ದಿ: 26–8–2010
5) ಅಧ್ಯಕ್ಷರು, ಕರ್ನಾಟಕ ರಾಜ್ಯ ಸರಕಾರಿ ನೌಕರರ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಇಎ/945/ 2013–14, ದಿನಾಂಕ: 5–12–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1), (2) ಮತ್ತು (3)ರ ಆದೇಶಗಳ ಅನುಸಾರ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ರಚಿಸುವ ಬಗ್ಗೆ ನಿಯಮಗಳನ್ನು ರಚಿಸಲಾಗಿದ್ದು, ಅದರಂತೆ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಕಾಲಕಾಲಕ್ಕೆ ಎರಡು ವರ್ಷಗಳ ಅವಧಿಗೆ ಪುನರ್ ರಚಿಸಲಾಗುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ರಚಿಸಲಾಗಿದ್ದು, ಇದರ ಎರಡೂ ವರ್ಷದ ಅವಧಿಯು ದಿನಾಂಕ:27–8–2012 ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ ಅಧ್ಯಕ್ಷರು, ಕರ್ನಾಟಕ ರಾಜ್ಯ ಸರಕಾರಿ ನೌಕರರ ಸಂಘ, ಬೆಂಗಳೂರು ಇವರು ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಎರಡು ವರ್ಷಕ್ಕೆ ಪುನರ್ ರಚಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಈಸಪ 2013, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2013**

ಸರ್ಕಾರದ ವಿವಿಧ ಇಲಾಖೆಗಳ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ಮತ್ತು ಸಂಘದ ಪ್ರತಿನಿಧಿಗಳನ್ನೊಳಗೊಂಡ ರಾಜ್ಯಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಸರ್ಕಾರವು ಈ ಕೆಳಕಂಡಂತೆ ಪುನರ್ ರಚಿಸಿದೆ.

**ಸರ್ಕಾರದ ಪ್ರತಿನಿಧಿಗಳು**

1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ – ಅಧ್ಯಕ್ಷರು
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ – ಸದಸ್ಯರು
3) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ – ಸದಸ್ಯರು
4) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾನೂನು ಇಲಾಖೆ – ಸದಸ್ಯರು
5) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) – ಸದಸ್ಯರು
6) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ – ಸದಸ್ಯರು
7) ಸರ್ಕಾರದ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) – ಸದಸ್ಯರು

**ನೌಕರರು ಸಂಘದ ಪ್ರತಿನಿಧಿಗಳು**

| ಕ್ರಮ ಸಂಖ್ಯೆ | ಹೆಸರು ಮತ್ತು ಕಛೇರಿ | ಇಲಾಖೆ | ಸಮಿತಿಯಲ್ಲಿನ ಪದನಾಮ |
|---|---|---|---|
| 1 | ಶ್ರೀ ಎಲ್ ಭೈರಪ್ಪ<br>ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಅಧೀನ ಕಾರ್ಯದರ್ಶಿ ಕರ್ನಾಟಕ ಸರ್ಕಾರದ ಸಚಿವಾಲಯ, ಜಲಸಂಪನ್ಮೂಲ ಇಲಾಖೆ, ವಿಕಾಸಸೌಧ, ಬೆಂಗಳೂರು | ಸದಸ್ಯರು |
| 2 | ಶ್ರೀ ಬಿ.ಎಂ. ಪಟೇಲ್‌ಪಾಂಡು<br>ಪ್ರಧಾನ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಪ್ರಥಮ ದರ್ಜೆ ಸಹಾಯಕರು ವಾಣಿಜ್ಯ ಮತ್ತು ಕೈಗಾರಿಕೆ ನಿರ್ದೇಶನಾಲಯ, ಖನಿಜ ಭವನ, ಬೆಂಗಳೂರು | ಸದಸ್ಯರು |
| 3 | ಶ್ರೀ ಜಿ.ಎಂ. ಸಣ್ಣಮುದ್ದಯ್ಯ,<br>ಗೌರವಾಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಚುನಾವಣಾ ಶಿರಸ್ತೇದಾರ್ ಜಿಲ್ಲಾಧಿಕಾರಿಗಳ ಕಛೇರಿ ತುಮಕೂರು ಜಿಲ್ಲೆ | ಸದಸ್ಯರು |
| 4 | ಶ್ರೀ ಯೋಗಾನಂದ,<br>ಖಜಾಂಚಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಅಧೀಕ್ಷಕರು, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಅರಮನೆ ರಸ್ತೆ, ಬೆಂಗಳೂರು | ಸದಸ್ಯರು |

| ಕ್ರಮ ಸಂಖ್ಯೆ | ಹೆಸರು ಮತ್ತು ಕಛೇರಿ | ಇಲಾಖೆ | ಸಮಿತಿಯಲ್ಲಿನ ಪದನಾಮ |
|---|---|---|---|
| 5 | ಶ್ರೀ ಬಸವರಾಜ ಗುರಿಕಾರ, ಅಧ್ಯಕ್ಷರು, ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ, ಗಾಂಧಿನಗರ, ಬೆಂಗಳೂರು | ಶಿಕ್ಷಣ ಇಲಾಖೆ | ಸದಸ್ಯರು |
| 6 | ಶ್ರೀ ಎಸ್. ಶಿವಣ್ಣ, ಅಧ್ಯಕ್ಷರು, ಕರ್ನಾಟಕ ರಾಜ್ಯ ಕಂದಾಯ ಇಲಾಖಾ ನೌಕರರ ಸಂಘ, ಜಿಲ್ಲಾಧಿಕಾರಿಗಳ ಕಛೇರಿ ಆವರಣ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು | ಕಂದಾಯ ಇಲಾಖೆ | ಸದಸ್ಯರು |
| 7 | ಶ್ರೀ ಬಿ.ಎಂ. ನಟರಾಜ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ಗ್ರೂಪ್ ಡಿ ನೌಕರರ ಸಂಘ, ಬೆಂಗಳೂರು | ಲೋಕೋಪಯೋಗಿ ಇಲಾಖೆ | ಸದಸ್ಯರು |
| 8 | ಶ್ರೀ ತಿಮ್ಮಯ್ಯ, ಅಧ್ಯಕ್ಷರು ಕರ್ನಾಟಕ ರಾಜ್ಯ ಸರ್ಕಾರಿ ವಾಹನ ಚಾಲಕರ ಕೇಂದ್ರ ಸಂಘ, ಕೆ.ಕೆ. ಗೆಸ್ಟ್ ಹೌಸ್ ಆವರಣ, ಹೈಗ್ರೌಂಡ್ ಬೆಂಗಳೂರು. | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 9 | ಶ್ರೀ ಹೆಚ್.ಕೆ. ರಾಮು, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಮೈಸೂರು | ಆಹಾರ ಶಿರಸ್ತೇದಾರ್ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಮೈಸೂರು | ಸದಸ್ಯರು |
| 10 | ಶ್ರೀ ಜಗದೀಶ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಚಿತ್ರದುರ್ಗ | ಲೋಕೋಪಯೋಗಿ ಇಲಾಖೆ, ಚಿತ್ರದುರ್ಗ | ಸದಸ್ಯರು |
| 11 | ಶ್ರೀ ಹೆಚ್. ರಾಜಕುಮಾರ್, ಅಧೀನ ಕಾರ್ಯದರ್ಶಿ ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನಾ ಇಲಾಖೆ ವಿಧಾನ ಸೌಧ, ಬೆಂಗಳೂರು | ಕರ್ನಾಟಕ ಸರ್ಕಾರದ ಸಚಿವಾಲಯ | ಸದಸ್ಯರು |
| 12 | ಶ್ರೀಮತಿ ಜೆ.ಆರ್. ಅನ್ನಪೂರ್ಣ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಬಹುಮಹಡಿಗಳ ಕಟ್ಟಡ, ಬೆಂಗಳೂರು | ಕರ್ನಾಟಕ ಸರ್ಕಾರದ ಸಚಿವಾಲಯ | ಸದಸ್ಯರು |

2. ಜಂಟಿ ಸಮಾಲೋಚನಾ ಸಮಿತಿಯ ಅಧ್ಯಕ್ಷರು, ಸಮಿತಿಯ ಮೊದಲನೆಯ ಸಭೆಯಲ್ಲಿ ಸದಸ್ಯರೊಡನೆ ಸಮಾಲೋಚಿಸಿ ಸದಸ್ಯರಲೊಬ್ಬರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸುವರು.

3. ದಿನಾಂಕ:19–10–1972ರ ಸರ್ಕಾರದ ಆದೇಶದ ಸಂಖ್ಯೆ: ಜಿಎಡಿ 7 ಡಿಎಸ್‌ಡಬ್ಲ್ಯೂ 69 ಇದರ ನಿಯಮ 7(ಬಿ) ಅನುಸಾರ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಂಟಿ ಸಮಾಲೋಚನಾ ಸಮಿತಿಯು ಎರಡು (2) ವರ್ಷಗಳ ಅವಧಿಯವರೆಗೆ ಕಾರ್ಯನಿರ್ವಹಿಸಲಿದೆ.

4. ಸಮಿತಿಯ ವ್ಯವಹಾರಗಳನ್ನು ದಿನಾಂಕ: 19–10–1972 ರ ಸರ್ಕಾರದ ಆದೇಶ ಸಂಖ್ಯೆ: ಜಿಎಡಿ 7 ಡಿಎಸ್‌ಡಬ್ಲ್ಯೂ 69 ಮತ್ತು ತದನಂತರದ ತಿದ್ದುಪಡಿಗಳಿಗನುಗುಣವಾಗಿ ನಡೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಆಸು–ಕಾರ್ಯಾಧ್ಯಯನ)

**PR - 237**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಎಂ.ಆರ್. ಹೆಗಡೆ, ರಾಜ್ಯಪಾಲರ ಕಾನೂನು ಸಲಹೆಗಾರರು, ರಾಜ್ಯಪಾಲರ ಸಚಿವಾಲಯ, ಇವರ ಗುತ್ತಿಗೆ ಆಧಾರದ ನೇಮಕಾತಿಯನ್ನು ವಿಸ್ತರಿಸುವ ಬಗ್ಗೆ

**ಓದಲಾಗಿದೆ:** ಕರ್ನಾಟಕ ರಾಜ್ಯಪಾಲರ ಕಾರ್ಯದರ್ಶಿ, ರಾಜಭವನ, ಬೆಂಗಳೂರು ರವರ ಅ.ಸ. ಪತ್ರ ಸಂಖ್ಯೆ: GS 77 EST 2011, ದಿನಾಂಕ: 05–09–2013

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಆಗ್ಗಿಂದಾಗ್ಗೆ ಘನತೆವೆತ್ತ ರಾಜ್ಯಪಾಲರ ಪರಿಗಣನೆಗೆ ಬರುವ ವಿಷಯಗಳ ಕುರಿತು ಸೂಕ್ತವಾದ ಕಾನೂನು ಪರಿಶೀಲನೆಗಾಗಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಪಿಆರ್‌ಬಿ 2011, ದಿನಾಂಕ: 06–09–2011ರಲ್ಲಿ ಶ್ರೀ ಎಂ.ಆರ್. ಹೆಗಡೆ, ಹಿಂದಿನ ಕಾನೂನು ಕಾರ್ಯದರ್ಶಿ ಮತ್ತು ಹಿಂದಿನ ಚುನಾವಣಾ ಆಯುಕ್ತರು, ಇವರನ್ನು ಗುತ್ತಿಗೆ ಆಧಾರದ ಮೇಲೆ ಎರಡು ವರ್ಷಗಳ ಅವಧಿಗೆ ಕಾನೂನು ಸಲಹೆಗಾರರಾಗಿ

ನೇಮಿಸಲಾಗಿದ್ದು, ಸದರಿ ಗುತ್ತಿಗೆ ಆಧಾರದ ನೇಮಕಾತಿಯ ಅವಧಿಯು ದಿನಾಂಕ: 05-09-2013ರಂದು ಮುಕ್ತಾಯಗೊಂಡಿರುವುದರಿಂದ, ಇವರ ನೇಮಕಾತಿಯ ಅವಧಿಯನ್ನು 6 ತಿಂಗಳವರೆಗೆ ವಿಸ್ತರಿಸುವಂತೆ ಘನತೆವೆತ್ತ ರಾಜ್ಯಪಾಲರ ಸಚಿವಾಲಯವು ಕೋರಿದೆ.

ಶ್ರೀ ಎಂ.ಆರ್. ಹೆಗಡೆ, ರಾಜ್ಯಪಾಲರ ಕಾನೂನು ಸಲಹೆಗಾರರು, ಇವರ ಗುತ್ತಿಗೆ ಆಧಾರದ ನೇಮಕಾತಿಯನ್ನು 6 ತಿಂಗಳ ಅವಧಿಗೆ ವಿಸ್ತರಿಸುವ ಬಗ್ಗೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಸಿಆಸುಇ 22 ಪಿಆರ್‌ಬಿ 2013, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2013**

ಶ್ರೀ ಎಂ.ಆರ್. ಹೆಗಡೆ, ಕರ್ನಾಟಕ ರಾಜ್ಯಪಾಲರ ಸಚಿವಾಲಯ ಸೇವೆಯಲ್ಲಿ ತಾತ್ಕಾಲಿಕವಾಗಿ ವೇತನ ಶ್ರೇಣಿ ರಹಿತ ರಾಜ್ಯಪಾಲರ ಕಾನೂನು ಸಲಹೆಗಾರರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇವರ ಗುತ್ತಿಗೆ ಆಧಾರದ ನೇಮಕಾತಿಯ ಅವಧಿಯನ್ನು ದಿನಾಂಕ: 06-09-2013ರಿಂದ ಪೂರ್ವಾನ್ವಯವಾಗುವಂತೆ ದಿನಾಂಕ: 06-03-2014ರವರೆಗೆ 6 ತಿಂಗಳ ಅವಧಿಗೆ ಮುಂದುವರೆಸಿ ಆದೇಶಿಸಲಾಗಿದೆ.

ಇವರ ಹಿಂದಿನ ಗುತ್ತಿಗೆ ಆಧಾರದ ನೇಮಕಾತಿಯು ಸರ್ಕಾರದ ಆದೇಶದಲ್ಲಿರುವ ಸೇವಾ ಷರತ್ತು ಹಾಗೂ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶೈಲಜಾ ಡಿ. ಬೋರ್ಕರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ರಾಜಕೀಯ)

**PR 238**

## ಸಹಕಾರ ಸಚಿವಾಲಯ

**ವಿಷಯ** : ರಾಯಬಾಗ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ರಾಯಬಾಗ, ಬೆಳಗಾವಿ ಜಿಲ್ಲೆ ಇದರ ವಿಶೇಷಾಧಿಕಾರಿಯ ಅವಧಿಯನ್ನು ಕಾರ್ಖಾನೆಯ ಗುತ್ತಿಗೆ ಅವಧಿ ಮುಗಿಯುವವರೆಗೆ ಅಂದರೆ ದಿನಾಂಕ: 30-09-2038ರವರೆಗೆ ವಿಸ್ತರಿಸುವ ಬಗ್ಗೆ

**ಉಲ್ಲೇಖ** :

1. ಸರ್ಕಾರದ ಆದೇಶ ಸಂಖ್ಯೆ: ಸಇ 87 12 ಸಸಕಾ 2011, ದಿನಾಂಕ : 25-07-2011
2. ವಿಶೇಷಾಧಿಕಾರಿ, ರಾಯಬಾಗ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ರಾಯಬಾಗ ರವರ ಪತ್ರ ಸಂಖ್ಯೆ: ರಾಸಸಕಾನಿ-ವರದಿ-2012-13-236, ದಿನಾಂಕ: 04-05-2012
3. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿಎಸ್/37/2002-03, ದಿನಾಂಕ: 18-08-2012

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ರಾಯಬಾಗ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಬೆಳಗಾವಿ ಜಿಲ್ಲೆ ಇದರ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ: 30-06-2012ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ: 8772-8776/2011 (ಎಸ್-ಆರ್‌ಇಎಸ್) ರಲ್ಲಿ ನ್ಯಾಯಾಲಯವು ದಿನಾಂಕ: 25-05-2011ರ ಆದೇಶದ ಮೇರೆಗೆ ಇನ್ನು ಒಂದು ವರ್ಷದ ಅವಧಿಗೆ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸುವುದು ಸೂಕ್ತವೆಂದು ದಿನಾಂಕ: 01-07-2012ರಿಂದ 30-06-2013ರವರೆಗೆ ವಿಸ್ತರಿಸುವ ಕುರಿತು ದಿನಾಂಕ: 27-04-2012ರಂದು ವಿಶೇಷಾಧಿಕಾರಿಯ ಸಭೆಯಲ್ಲಿ ಕೈಗೊಂಡ ತೀರ್ಮಾನದಂತೆ ಓದಲಾದ (2)ರಲ್ಲಿ ದಿನಾಂಕ: 04-05-2012ರ ಪತ್ರದ ಮೂಲಕ ಪ್ರಸ್ತಾವೆಯನ್ನು ಕಾರ್ಖಾನೆಯ ವಿಶೇಷಾಧಿಕಾರಿಯವರು ಸಲ್ಲಿಸಿರುತ್ತಾರೆ.

ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು, ಬೆಂಗಳೂರು ಅವರ ದಿನಾಂಕ: 18-08-2012ರ ಪತ್ರದಲ್ಲಿ ಕಾರ್ಖಾನೆಯ ವಿಶೇಷಾಧಿಕಾರಿಯ ಅವಧಿಯನ್ನು ಮುಂದುವರೆಸಿ ದಿನಾಂಕ: 30-09-2038ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವವನ್ನು ಪರಿಶೀಲಿಸಲಾಗಿ, ರಾಯಬಾಗ ಸಹಕಾರ ಸಕ್ಕರೆ ಕಾರ್ಖಾನೆಯ ವಿಶೇಷಾಧಿಕಾರಿಯ ಅವಧಿಯನ್ನು ದೀರ್ಘಕಾಲದವರೆಗೆ ಅಂದರೆ ದಿನಾಂಕ: 30-09-2038 ರವರೆಗೆ ಈ ಕೆಳಕಂಡ ಕಾರಣಗಳಿಂದ ವಿಸ್ತರಿಸುವ ಅಗತ್ಯತೆ ಇದೆಯೆಂದು ಮನಗಂಡಿದೆ.

ಉಚ್ಚ ನ್ಯಾಯಾಲಯದ ರಿಟ್ ಪಿಟಿಷನ್ ಸಂಖ್ಯೆ: 8772-8776/2001 ಇದರಡಿ ಸದರಿ ಕಾರ್ಖಾನೆಯ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸುವ ಬಗ್ಗೆ ರಾಜ್ಯ ಸರ್ಕಾರ ಪರಿಶೀಲಿಸಬೇಕೆಂದು ಆದೇಶಿಸಿರುತ್ತಾರೆ.

ಕಾರ್ಖಾನೆಯು 2004-05ನೇ ಸಾಲಿನಿಂದ ಸ್ಥಗಿತಗೊಂಡಿದ್ದರಿಂದ 30 ವರ್ಷಗಳ ಅವಧಿಗೆ ಲೀಸಿಗೆ ನೀಡಿದ್ದು ಮತ್ತೆ ಆಡಳಿತ ಮಂಡಳಿ ರಚನೆ ಮಾಡುವುದರಿಂದ ಕಾರ್ಖಾನೆಯು ಅಭದ್ರತೆಗೆ ತಲುಪುತ್ತದೆ.

ಈ ಹಿಂದೆ ಶ್ರೀರಾಮ ಸಹಕಾರ ಸಕ್ಕರೆ ಕಾರ್ಖಾನೆಯ ವಿಶೇಷಾಧಿಕಾರಿಯ ಅವಧಿಯನ್ನು ಸಹ 22 ವರ್ಷಗಳ ದೀರ್ಘ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ದಿನಾಂಕ: 18-08-2012ರ ಪತ್ರದಲ್ಲಿ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ: 30-09-2038ರವರೆಗೆ ವಿಸ್ತರಿಸಲು ಮಾಡಿರುವ ಶಿಫಾರಸ್ಸು ಕಾರ್ಖಾನೆಯ ಅಭಿವೃದ್ಧಿಗೆ ಪೂರಕ ವಾತಾವರಣ ಸೃಷ್ಟಿಸಲು ಸಹಕಾರಿಯಾಗುವುದು ಎಂದು ಮನಗಂಡಿದೆ.

ಕಾರ್ಖಾನೆಗೆ ವಿಶೇಷಾಧಿಕಾರಿಯನ್ನು ನೇಮಿಸಿದ ನಂತರ ಕಾರ್ಖಾನೆಯ ಶಾಸನಬದ್ಧ ಬಾಕಿಗಳನ್ನು ಪಾವತಿಸುವುದರ ಜೊತೆಗೆ ರೈತರ ಮತ್ತು ಕಾರ್ಮಿಕರ ಹಿತಾಸಕ್ತಿಯನ್ನು ಕಾಪಾಡುತ್ತಿರುವುದನ್ನು ಗಮನಿಸಿದೆ.

1997ನೇ ಸಂವಿಧಾನ ತಿದ್ದುಪಡಿ ಜಾರಿಗೊಳಿಸುವ ಸಂದರ್ಭದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ನ್ನು ಉಳಿಸಿಕೊಳ್ಳುವ ಅಥವಾ ಕೈಬಿಡುವ ಅಂತಿಮ ತೀರ್ಮಾನವನ್ನು ಸರ್ಕಾರವು ಇನ್ನೂ ತೆಗೆದುಕೊಂಡಿರುವುದಿಲ್ಲ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಸ್ತುತ ಸನ್ನಿವೇಶದಲ್ಲಿ ರಾಯಬಾಗ ಸಹಕಾರ ಸಕ್ಕರೆ ಕಾರ್ಖಾನೆಗೆ ವಿಶೇಷಾಧಿಕಾರಿಯನ್ನು ದೀರ್ಘ ಕಾಲದ ಅವಧಿಗೆ ನೇಮಿಸುವ ಅಗತ್ಯತೆ ಇದೆಯೆಂದು ಮನಗಂಡಿದೆ.

ಆದುದರಿಂದ, ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ಕಾರ್ಖಾನೆಯ ರೈತ ಸದಸ್ಯರುಗಳ, ಕಾರ್ಮಿಕರ ಮತ್ತು ಕಾರ್ಖಾನೆಯ ಭವಿಷ್ಯದ ದೃಷ್ಟಿಯಿಂದ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿ ರಾಯಬಾಗ ಸಹಕಾರ ಸಕ್ಕರೆ ಕಾರ್ಖಾನೆ, ಬೆಳಗಾವಿ ಇದರ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ: 01-07-2012ರಿಂದ ಜಾರಿಗೆ ಬರುವಂತೆ ಕಾರ್ಖಾನೆಯ ಗುತ್ತಿಗೆ ಅವಧಿಯು ಮುಗಿಯುವವರೆಗೆ ಅಂದರೆ, ದಿನಾಂಕ: 30-09-2038ರವರೆಗೆ ವಿಸ್ತರಿಸಲು ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 16 ಸಸಕಾ 2012, ಬೆಂಗಳೂರು, ದಿನಾಂಕ: 15ನೇ ನವೆಂಬರ್, 2012**

. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಯಬಾಗ ಸಹಕಾರಿ ಸಕ್ಕರೆ ಕಾರ್ಖಾನೆಯ ರೈತ ಸದಸ್ಯರುಗಳ ಮತ್ತು ಕಾರ್ಮಿಕರ ಹಿತದೃಷ್ಟಿ ಹಾಗೂ ಕಾರ್ಖಾನೆಯ ಭವಿಷ್ಯದ ದೃಷ್ಟಿಯಿಂದ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 31(1)ಅನ್ನು ಸಡಿಲಿಸಿ ಸದರಿ ಸಂಘದ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ: 01-07-2012ರಿಂದ ಜಾರಿಗೆ ಬರುವಂತೆ ದಿನಾಂಕ: 30-09-2038ರವರೆಗೆ ಅಥವಾ ಚುನಾವಣೆ ನಡೆಸುವ ದಿನಾಂಕ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30-09-2038ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಎಸ್. ರಮಣರೆಡ್ಡಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**P R 239**
**SC 25**

## ಸಹಕಾರ ಸಚಿವಾಲಯ

**ವಿಷಯ** : 2013-14ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಅನುದಾನವನ್ನು ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ** :
1. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಓಟಿಎಸ್-2/ಲ್ಯಾಂಪ್ಸ್/76/2013-14, ದಿನಾಂಕ: 24-09-2013
2. ಸರ್ಕಾರದ ಆದೇಶ ಸಂಖ್ಯೆ: ಸಇ 104 ಸಂಮಾಸ 2013, ದಿನಾಂಕ: 11-10-2013
3. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2013, ದಿನಾಂಕ: 16-11-2013
4. ಸರ್ಕಾರದ ಆದೇಶ ಸಂಖ್ಯೆ: ಸಇ 104 ಸಂಮಾಸ 2013, ದಿನಾಂಕ: 21-12-2013
5. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಓಟಿಎಸ್-2/ಲ್ಯಾಂಪ್ಸ್/76/2013-14, ದಿನಾಂಕ: 19-12-2013 ಹಾಗೂ ದಿನಾಂಕ: 20-01-2014

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಇವರು ಸಲ್ಲಿಸಿರುವ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರದ ಆದೇಶ ಸಂಖ್ಯೆ: ಸಇ 72 ಆಂಆಸ (ಎ) 2013, ದಿನಾಂಕ: 07-08-2013ರನ್ವಯ ರಾಜ್ಯ ಯೋಜನೆಯಡಿಯಲ್ಲಿ 2013-14ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮಾರುಕಟ್ಟೆ ಮೂಲಭೂತ ಸೌಕರ್ಯಗಳ ಸ್ಥಾಪನೆಗಾಗಿ 423 ಗಿರಿಜನ ಉಪ ಯೋಜನೆಯಡಿ ಲೆಕ್ಕ ಶೀರ್ಷಿಕೆ 2425-00-108-0-39ರ ಅಡಿಯಲ್ಲಿ ರೂ. 25.00 ಲಕ್ಷಗಳ ಆಯವ್ಯಯ ಅವಕಾಶವನ್ನು ಕಲ್ಪಿಸಲಾಗಿದೆ.

ಈ ಪೈಕಿ ಮೇಲೆ ಓದಲಾದ (2)ರ ಆದೇಶದಲ್ಲಿ ಅರ್ಹ ನಾಲ್ಕು ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮೊದಲನೇ ಹಾಗೂ ಎರಡನೇ ಕಂತಿನಲ್ಲಿ ರೂ. 12.50 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿರುತ್ತದೆ.

ಮೇಲೆ ಓದಲಾದ (3)ರ ಆರ್ಥಿಕ ಇಲಾಖೆಯ ಆದೇಶದಂತೆ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 75ರಷ್ಟು ಬಿಡುಗಡೆ ಮಾಡಲು ಸರ್ಕಾರದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಮೇಲೆ ಓದಲಾದ (4)ರ ಆದೇಶದ ಮೂಲಕ ಮೂರನೇ ಕಂತಿನಲ್ಲಿ ನಾಲ್ಕು ಅರ್ಹ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ರೂ. 6.25 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ (5)ರ ಸಹಕಾರ ಸಂಘಗಳ ನಿಬಂಧಕರ ದಿನಾಂಕ: 20-01-2014ರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 104 ಸಂಮಾಸ 2013, ಬೆಂಗಳೂರು ದಿನಾಂಕ: 05ನೇ ಫೆಬ್ರವರಿ, 2014**

ರಾಜ್ಯ ಯೋಜನೆಯಡಿಯಲ್ಲಿ 2013-14ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮಾರುಕಟ್ಟೆ ಮೂಲಭೂತ ಸೌಕರ್ಯಗಳ ಸ್ಥಾಪನೆಗಾಗಿ ಗಿರಿಜನ ಉಪ ಯೋಜನೆಯಡಿ ಲೆಕ್ಕ ಶೀರ್ಷಿಕೆ 2425-00-108-0-39-423ರ ಅಡಿಯಲ್ಲಿ ರೂ. 25.00 ಲಕ್ಷಗಳ ಆಯವ್ಯಯ ಅವಕಾಶವನ್ನು ಕಲ್ಪಿಸಿದ್ದು, ಇದರಲ್ಲಿ ಮೊದಲನೇ, ಎರಡನೇ ಹಾಗೂ ಮೂರನೇ ಕಂತಿನಲ್ಲಿ ಅರ್ಹ ನಾಲ್ಕು ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಒಟ್ಟು ರೂ. 18.75 ಲಕ್ಷ (ಹದಿನೆಂಟು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಈಗಾಗಲೇ ಬಿಡುಗಡೆಗೊಳಿಸಲಾಗಿದ್ದು, ನಾಲ್ಕನೇ ಹಾಗೂ ಕೊನೆಯ ಕಂತಿನ ಹಣ ರೂ. 6.25 ಲಕ್ಷ (ಆರು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ನಾಲ್ಕು ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಕೆಲವು ಷರತ್ತಿಗಳಿಗೊಳಪಟ್ಟು ಬಿಡುಗಡೆಗೊಳಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಲ್ಯಾಂಪ್ಸ್ ಸಹಕಾರ ಸಂಘಗಳ ಹೆಸರು | ನಾಲ್ಕನೆ ಹಾಗೂ ಕೊನೆಯ ಕಂತಿನಲ್ಲಿ ಬಿಡುಗಡೆಗೊಳಿಸಿದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ | 0.75 |
| 2. | ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ | 2.00 |
| 3. | ವನಶ್ರೀ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಹಳಿಯಾಳ, ಉತ್ತರ ಕನ್ನಡ ಜಿಲ್ಲೆ | 1.75 |
| 4. | ಗುಂಡ್ಲುಪೇಟೆ ತಾಲ್ಲೂಕು ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ | 1.75 |
| | ಒಟ್ಟು – | 6.25 |

**ಷರತ್ತುಗಳು :**

1. ಈ ಅನುದಾನ ವೆಚ್ಚವನ್ನು 2013-14ನೇ ಸಾಲಿನ ಲೆಕ್ಕ ಶೀರ್ಷಿಕೆ 2425-00-108-0-39-423 ಗಿರಿಜನ ಉಪಯೋಜನೆ (ಯೋ) ಇದರಡಿಯಲ್ಲಿ ಭರಿಸತಕ್ಕದ್ದು.
2. ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳ ನಿ., ಮೈಸೂರು ಇವರು ಯೋಜನೆಯಲ್ಲಿ ಪಡೆದ ಹಣವನ್ನು ಯೋಜನೆಯ ಪ್ರಗತಿಗನುಗುಣವಾಗಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಬಿಡುಗಡೆ ಮಾಡುವುದು.
3. ದಿನಾಂಕ: 26-08-2013ರ ರಾಜ್ಯಮಟ್ಟದ ಉನ್ನತಾಧಿಕಾರ ಸಮಿತಿಯಲ್ಲಿ ಅನುಮೋದನೆ ಪಡೆದಿರುವ ಪ್ರತಿಯನ್ನು ಒದಗಿಸುವುದು ಮತ್ತು ಲ್ಯಾಂಪ್ಸ್ ಸಹಕಾರ ಸಂಘಗಳು ಈ ಯೋಜನೆಯಲ್ಲಿ ಬಿಡುಗಡೆಯಾದ ಹಣವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು 2000ನ್ನು ಪಾಲಿಸಿ ಕಾಮಗಾರಿಗಳನ್ನು ನಿರ್ವಹಿಸುವುದು.
4. ಸಹಕಾರ ಸಂಘಗಳ ನಿಬಂಧಕರು ಲ್ಯಾಂಪ್ಸ್ ಸಹಕಾರ ಸಂಘಗಳು ಮಾಡುವ ವೆಚ್ಚವನ್ನು ನಿಯತಕಾಲಿಕವಾಗಿ ಪರಾಮರ್ಶೆ ಮಾಡತಕ್ಕದ್ದು, ಮತ್ತು ಅನುದಾನದ ವಿನಿಯೋಗದ ಬಗ್ಗೆ ಪ್ರಮಾಣ ಪತ್ರವನ್ನು ಪಡೆದು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಮಂಜೂರು ಮಾಡಿದ ಅನುದಾನ ರೂ. 6.25 ಲಕ್ಷ (ಆರು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ಮಾತ್ರ) ಗಳನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರು ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳದಿಂದ ಸ್ವೀಕೃತಿಯನ್ನು ಪಡೆದು ಮೇಲು ರುಜು ಮಾಡಿ ಖಜಾನೆಯಿಂದ ಹಣವನ್ನು ಡ್ರಾ ಮಾಡಿ ಮಹಾಮಂಡಳಕ್ಕೆ ಪಾವತಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ಚಿಕ್ಕಮಗಳೂರು, ಉತ್ತರ ಕನ್ನಡ ಹಾಗೂ ಚಾಮರಾಜನಗರ ಜಿಲ್ಲೆ ಇವರಿಗೆ ಅಧಿಕಾರ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 32 ವೆಚ್ಚ-2/2014, ದಿನಾಂಕ: 29-01-2014ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್. ನಾಗರಾಜಯ್ಯ,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

**P R 240**

**SC 50**

## ಸಹಕಾರ ಸಚಿವಾಲಯ

ವಿಷಯ : 2013–14ನೇ ಸಾಲಿನ ಸಹಕಾರ ಇಲಾಖೆಯ ಮುಂದುವರೆದ ಯೋಜನೆಗಳಡಿಯಲ್ಲಿ **"ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆ"**ಯಲ್ಲಿ (ಷೇರು ಬಂಡವಾಳ ರೂಪದಲ್ಲಿ) ಸರ್ಕಾರದ ಮಂಜೂರಾತಿಗಾಗಿ ಸಲ್ಲಿಸಿರುವ ಪ್ರಸ್ತಾವನೆ ಬಗ್ಗೆ

ಓದಲಾಗಿದೆ :

1. ಸಹಕಾರ ಸಂಘಗಳ ಅಪರ ನಿಬಂಧಕರ (ಬಳಕೆ ಮತ್ತು ಮಾರಾಟ) ಪತ್ರ ಸಂಖ್ಯೆ: ಆರ್‌ಸಿಎಸ್/ಎಂಕೆಟಿ–2/7/2013–14, ದಿನಾಂಕ: 11–07–2013, ದಿನಾಂಕ: 17–08–2013 ಹಾಗೂ ದಿನಾಂಕ: 22–11–2013
2. ಸರ್ಕಾರದ ಆದೇಶ ಸಂಖ್ಯೆ: ಸಇ 73 ಸಂಮಾಸ 2013, ದಿನಾಂಕ: 22–08–2013
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ–1, ಟಿಎಫ್‌ಪಿ 2013, ದಿನಾಂಕ: 16–11–2013
4. ಸರ್ಕಾರದ ಆದೇಶ ಸಂಖ್ಯೆ: ಸಇ 73 ಸಂಮಾಸ 2013, ದಿನಾಂಕ: 21–12–2013
5. ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಂಕೆಟಿ–2/07/2013–14, ದಿನಾಂಕ: 17–01–2014

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (4)ರ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರ ದಿನಾಂಕ: 11–07–2013, ದಿನಾಂಕ: 17–08–2013, ದಿನಾಂಕ: 22–11–2013 ಹಾಗೂ 17–01–2014ರ ಪತ್ರಗಳಲ್ಲಿ ಕೋರಲಾದ ಪ್ರಸ್ತಾವೆಯನ್ನು ಪರಿಶೀಲಿಸಿ, 2013–14ನೇ ಸಾಲಿಗೆ ಸಹಕಾರ ಇಲಾಖೆಯ ಮುಂದುವರೆದ ಯೋಜನೆಯಡಿಯಲ್ಲಿ **"ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆ"** (ಷೇರು ಬಂಡವಾಳ ರೂಪದಲ್ಲಿ)ಯಲ್ಲಿ ಅರ್ಹ ಸಹಕಾರ ಸಂಘಗಳಿಗೆ ಷೇರು ಬಂಡವಾಳದ ನೆರವನ್ನು ನೀಡುವುದಕ್ಕಾಗಿ **"ಲೆಕ್ಕ ಶೀರ್ಷಿಕೆ 4425–00–108–0–57–100"**ರಡಿಯಲ್ಲಿ ಆಯವ್ಯಯದಲ್ಲಿ ರೂ. 40.00 ಲಕ್ಷಗಳ ಅನುದಾನ ಲಭ್ಯವಿದ್ದು, ಈ ಪೈಕಿ ಮೇಲೆ ಓದಲಾದ (2)ರ ಸರ್ಕಾರದ ಆದೇಶ ದಿನಾಂಕ: 22–08–2013ರ ಮೂಲಕ ರೂ. 20.00 ಲಕ್ಷಗಳನ್ನು ಮೊದಲನೇ ಹಾಗೂ ಎರಡನೇ ಕಂತಾಗಿ ನಾಲ್ಕು ಅರ್ಹ ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘಗಳಿಗೆ ಬಿಡುಗಡೆಗೊಳಿಸಿ ಆದೇಶಿಸಲಾಗಿದೆ.

ಆರ್ಥಿಕ ಇಲಾಖೆಯ ಆದೇಶದಂತೆ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 75ರಷ್ಟು ಬಿಡುಗಡೆ ಮಾಡಲು ಸರ್ಕಾರದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಮೇಲೆ ಓದಲಾದ (3)ರ ಆದೇಶದ ಮೂಲಕ ಮೂರನೇ ಕಂತಿನಲ್ಲಿ ನಾಲ್ಕು ಅರ್ಹ ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘಗಳಿಗೆ 10.00 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ (5)ರ ಸಹಕಾರ ಸಂಘಗಳ ಅಪರ ನಿಬಂಧಕರು, (ಬಳಕೆ ಮತ್ತು ಮಾರಾಟ) ಇವರ ದಿನಾಂಕ: 07–01–2014ರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 73 ಸಂಮಾಸ 2013, ಬೆಂಗಳೂರು ದಿನಾಂಕ: 12ನೇ ಫೆಬ್ರವರಿ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2013–14ನೇ ಸಾಲಿನ ಆಯ–ವ್ಯಯದಲ್ಲಿ ಸಹಕಾರ ಇಲಾಖೆಯ ಮುಂದುವರೆದ ಯೋಜನೆಗಳಡಿಯಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ (ಷೇರು ಬಂಡವಾಳ ರೂಪದಲ್ಲಿ) ಯೋಜನೆಯಡಿ ನಾಲ್ಕು ಅರ್ಹ **ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘಗಳಿಗೆ** ನಾಲ್ಕನೇ ಹಾಗೂ ಕೊನೆಯ ಕಂತಾಗಿ ತಲಾ **ರೂ. 2.50 ಲಕ್ಷ** ರೂಪಾಯಿಗಳಂತೆ ಒಟ್ಟು **ರೂ. 10.00 (ಹತ್ತು ಲಕ್ಷ ರೂಪಾಯಿಗಳು ಮಾತ್ರ)** ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಈ ವೆಚ್ಚವನ್ನು 2013–14ನೇ ಸಾಲಿನ ಆಯ–ವ್ಯಯದ **"ಲೆಕ್ಕ ಶೀರ್ಷಿಕೆ 4425–00–108–0–57–100"** ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಠೇವಣಿಸತಕ್ಕದ್ದು. ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಉಪಯೋಗ ಪ್ರಮಾಣ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 47 ವೆಚ್ಚ–2/2014, ದಿನಾಂಕ: 06–02–2014ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್. ನಾಗರಾಜಯ್ಯ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

P R 241
SC 100

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : ಚಿತ್ರದುರ್ಗ ಜಿಲ್ಲೆ ಹೊಸದುರ್ಗ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಬಗ್ಗೆ

**ಓದಲಾಗಿದೆ** :

1. ಸರ್ಕಾರದ ಪತ್ರ ಸಂಖ್ಯೆ: ಲಾ 141 ಎಲ್‌ಸಿಎಲ್ 2013, ದಿನಾಂಕ: 27–08–2013
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ರವರ ಪತ್ರ ದಿನಾಂಕ: 19–09–2013
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆರವರ ಪತ್ರ ದಿನಾಂಕ: 12–11–2013

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಸಾರ್ವಜನಿಕರಿಂದ ಮನವಿಗಳು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 27–08–2013ರ ಪತ್ರದಲ್ಲಿ ಚಿತ್ರದುರ್ಗ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ 3 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಸಿವಿಲ್ ನ್ಯಾಯಾಧೀಶರು ಮತ್ತು ಪ್ರ.ದ.ನ್ಯಾ, ದಂಡಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರು ಕೇಂದ್ರ ಸರ್ಕಾರದಿಂದ ನೇಮಕಗೊಂಡ ಯಾವುದೇ ನೋಟರಿಗಳು ಇರುವುದಿಲ್ಲವೆಂದು ಹಾಗೂ ರಾಜ್ಯ ಸರ್ಕಾರದಿಂದ ನೇಮಕಗೊಂಡ 03 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿದ್ದು, ಹೊಸದುರ್ಗ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆ ಎಂದು ತಿಳಿಸಿರುವ ವರದಿಯನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 19–09–2013ರ ಪತ್ರದೊಂದಿಗೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರು ಲಗತ್ತಿಸಿ ಸಲ್ಲಿಸುತ್ತಾ, ಹೊಸದುರ್ಗದ ಪ್ರಧಾನ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ.ರವರ ವರದಿ, ಹೊಸದುರ್ಗದ ವಕೀಲರ ಸಂಘದವರು ನೀಡಿರುವ ಠರಾವು ಹಾಗೂ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ನೋಟರಿಗಳು ಅನುಪ್ರಮಾಣಿಸಿರುವ ಅಂಕಿಅಂಶಗಳನ್ನು ಅವಲೋಕಿಸಿ, ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆಯೆಂದು ಅಭಿಪ್ರಾಯ ನೀಡಿದ್ದಾರೆ.

ಅದರಂತೆ, ತಹಸೀಲ್ದಾರ್, ಹೊಸದುರ್ಗ ಇವರಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇದೆ ಎಂಬ ನಿರ್ಣಯದ ಪತ್ರದ ಮೇಲೆ (3)ರಲ್ಲಿ ಓದಲಾದ ದಿನಾಂಕ: 12–11–2013ರ ಪತ್ರದೊಂದಿಗೆ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರು, ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಹೊಸದುರ್ಗ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 141 ಎಲ್‌ಸಿಎಲ್ 2013, ಬೆಂಗಳೂರು ದಿನಾಂಕ: 19ನೇ ಫೆಬ್ರವರಿ, 2014**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್. ಜಯರಾಮು,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**P R 242**
**SC 25**

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ 2013–14ರ ಹಣಕಾಸು ವರ್ಷದಲ್ಲಿ ತೃತೀಯ ತ್ರೈಮಾಸಿಕ ಅವಧಿಗೆ ಸಹಾಯಾನುದಾನದ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್‌ಆರ್ 2013 ದಿನಾಂಕ: 29.04.2013 ಮತ್ತು 26.8.2013
2) ಕವಿನಿ ಆಯೋಗದ ಪತ್ರ ಸಂಖ್ಯೆ ನಂ. ಎಫ್/13/ಎಎ/ಕೆಇಆರ್‌ಸಿ/1116, ದಿನಾಂಕ: 23–10–2013

**ಪ್ರಸ್ತಾವನೆ:**

1. 2013–14ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಸಲುವಾಗಿ ರೂ. 300.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಇದರಲ್ಲಿ ರೂ. 150.00 ಲಕ್ಷಗಳಷ್ಟು ಹಣವನ್ನು ಎರಡು ಕಂತುಗಳಲ್ಲಿ ಈಗಾಗಲೇ ಬಿಡುಗಡೆ ಮಾಡಿದೆ.

2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಭರಿಸುವ ಸಲುವಾಗಿ 2013-14ನೇ ಸಾಲಿನ ತೃತೀಯ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 75.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 19 ಪಿಎಸ್ಆರ್ 2013 ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್, 2013.**

ಸರ್ಕಾರವು 2013-14ನೇ ಹಣಕಾಸು ವರ್ಷದ ತೃತೀಯ ತ್ರೈಮಾಸಿಕ ಅವಧಿಗೆ ಲೆಕ್ಕ ಶೀರ್ಷಿಕೆ "2801-80-101-1-07-101 ಸಹಾಯಾನುದಾನ (ಯೋಜನೇತರ)" ಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 75.00 ಲಕ್ಷ (ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ, ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2013 ದಿನಾಂಕ: 20-04-2013ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

P.R. 77

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ವತಿಯಿಂದ ಸೌರ ವಿದ್ಯುತ್ ಚಾಲಿತ ನೀರಾವರಿ ಪಂಪ್‌ಸೆಟ್‌ಗಳು, ಸೌರ ವಿದ್ಯುತ್ ಮೇಲ್ಛಾವಣಿ ಹಾಗೂ ಎಲ್ಇಡಿ ಸೌರಶಕ್ತಿ ಕಂದೀಲುಗಳನ್ನು ಒದಗಿಸುವ ಯೋಜನೆಗಳಿಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರ ಪ್ರಸ್ತಾವನೆ ಸಂಖ್ಯೆ: ಕೆಆರ್ಇಡಿ,07.ಆಯವ್ಯಯ.2013/1910 ದಿ: 20-08-13.

**ಪ್ರಸ್ತಾವನೆ:**

1. ಅಸಂಪ್ರದಾಯಿಕ ಇಂಧನ ಮೂಲಗಳನ್ನು ಪ್ರೋತ್ಸಾಹಿಸಲು ಶಕ್ತಿಯ ರೂಪಗಳಾದ ಪವನ, ಕಿರು ಜಲವಿದ್ಯುತ್, ಜೈವಿಕ ಇಂಧನ, ಸೌರಶಕ್ತಿ ಮತ್ತು ತ್ಯಾಜ್ಯಗಳಿಂದ ವಿದ್ಯುತ್ ಉತ್ಪಾದನೆಗೆ ಉತ್ತೇಜನೆ ನೀಡುವುದು ಸರ್ಕಾರದ ಉದ್ದೇಶವಾಗಿರುತ್ತದೆ. ರಾಜ್ಯದಲ್ಲಿ ಸೌರ ವಿದ್ಯುತ್ ಶಕ್ತಿಯು ಹೇರಳವಾಗಿ ಲಭ್ಯವಿರುವುದರಿಂದ ಮತ್ತು ಸುಸ್ಥಿರವಾಗಿರುವುದರಿಂದ ಸೌರ ವಿದ್ಯುತ್ ಯೋಜನೆಗಳನ್ನು ಅಭಿವೃದ್ಧಿ ಪಡಿಸುವುದು ಸರ್ಕಾರದ ಒಂದು ಕಾರ್ಯಕ್ರಮವಾಗಿರುತ್ತದೆ. ಈ ನಿಟ್ಟಿನಲ್ಲಿ 2013-14ನೇ ಸಾಲಿನ ಪರಿಷ್ಕೃತ ಆಯವ್ಯಯದಲ್ಲಿ ಹೊಸ ಯೋಜನೆಯಾದ ಸೌರಶಕ್ತಿ ಯೋಜನೆಯ ಅನುಷ್ಠಾನಕ್ಕಾಗಿ ರೂ. 10.00 ಕೋಟಿಗಳನ್ನು ಲೆಕ್ಕ ಶೀರ್ಷಿಕೆ 2801-80-800-1-08-059 ಯಡಿ ಒದಗಿಸಲಾಗಿದೆ.

2. ಸೌರಶಕ್ತಿ ಯೋಜನೆಗೆ ಹಂಚಿಕೆಯಾದ ರೂ. 10.00 ಕೋಟಿಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ 2013-14ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಈ ಕೆಳಕಂಡ 3 ಯೋಜನೆಗಳನ್ನು ಪ್ರಸ್ತಾಪಿಸಲಾಗಿದೆ.

(ರೂ. ಕೋಟಿಗಳಲ್ಲಿ)

| ಕ್ರ. ಸಂ | ಯೋಜನೆಗಳ ವಿವರ | 2013-14ನೇ ಸಾಲಿನಲ್ಲಿ ಹಂಚಿಕೆಯಾದ ಮೊತ್ತ |
|---|---|---|
| 1. | ರಾಜ್ಯದ ರೈತರಿಗೆ ಸೌರಶಕ್ತಿ ಪಂಪ್‌ಸೆಟ್ ನೀಡುವ ಯೋಜನೆ | 4.00 |
| 2. | ಜಾಲಮುಕ್ತ ಸೌರಶಕ್ತಿ ಮೇಲ್ಛಾವಣಿ ಯೋಜನೆಯ ಅಡಿಯಲ್ಲಿ ಮೇಲ್ಛಾವಣಿ ಸೌರಶಕ್ತಿ ಉಪಕರಣಗಳನ್ನು ಒದಗಿಸುವ ಯೋಜನೆ | 3.00 |
| 3. | ಗೃಹ ಬಳಕೆ ಸೌರಶಕ್ತಿ ಉಪಕರಣಗಳನ್ನು ಶೇ. 75ರಷ್ಟು ಸಹಾಯಧನ ಒದಗಿಸುವ ಯೋಜನೆಯಡಿಯಲ್ಲಿ: ಎಲ್.ಇ.ಡಿ. ಸೌರಶಕ್ತಿ ಕಂದೀಲು (Solar Lantern) ವಿತರಿಸುವ ಯೋಜನೆ | 3.00 |
| | **ಒಟ್ಟು** | **10.00** |

3. ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯದಿಂದ ಸೌರ ವಿದ್ಯುತ್ ಚಾಲಿತ ನೀರಾವರಿ ಪಂಪ್‌ಸೆಟ್ ಹಾಗೂ ಸೌರ ವಿದ್ಯುತ್ ಮೇಲ್ಛಾವಣಿ ಉಪಕರಣಗಳ ಖರೀದಿಗಾಗಿ, ಉಪಕರಣದ ವೆಚ್ಚದ ಮೇಲೆ ಫಲಾನುಭವಿಗಳಿಗೆ ಶೇಕಡಾ 30ರಷ್ಟು ಸಹಾಯಧನ ನೀಡಲಾಗುತ್ತದೆ. ಆದರೆ ಸೌರ ಶಕ್ತಿ ಕಂದೀಲು ಯೋಜನೆಗೆ ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯವು ಯಾವುದೇ ಸಹಾಯಧನ ನೀಡುವುದಿಲ್ಲ. ಗೃಹ ಬಳಕೆ ಸೌರಶಕ್ತಿ ಕಂದೀಲುಗಳನ್ನು ರಾಜ್ಯ ಸರ್ಕಾರದಿಂದ ಶೇಕಡಾ 75ರಷ್ಟು ಸಹಾಯಧನವನ್ನು ಒದಗಿಸಿ ನೀಡಲು ಉದ್ದೇಶಿಸಿದೆ ಮತ್ತು ಈ ನಿಟ್ಟಿನಲ್ಲಿ ಸೌರ ಶಕ್ತಿ ಯೋಜನೆಗಳ ಉತ್ತೇಜನಕ್ಕಾಗಿ ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯದಿಂದ ನೀಡುವ ಶೇಕಡಾ 30ರಷ್ಟು ಸಹಾಯಧನವನ್ನು ಉಪಯೋಗಿಸಿಕೊಂಡು 2013-14ನೇ ಸಾಲಿನಲ್ಲಿ ರಾಜ್ಯದ ವತಿಯಿಂದ ಕೆಳಕಂಡ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

| ಕ್ರ. ಸಂ | ಯೋಜನೆಗಳ ವಿವರ | | ಸೌರಶಕ್ತಿ ಪಂಪ್‌ಸೆಟ್ ನೀಡುವ ಯೋಜನೆ | ಜಾಲಮುಕ್ತ ಸೌರಶಕ್ತಿ ಮೇಲ್ಛಾವಣಿ ಯೋಜನೆಯ ಅಡಿಯಲ್ಲಿ ಮೇಲ್ಛಾವಣಿ ಸೌರಶಕ್ತಿ ಉಪಕರಣಗಳನ್ನು ಒದಗಿಸುವ ಯೋಜನೆ | ಎಲ್.ಇ.ಡಿ. ಸೌರಶಕ್ತಿ ಕಂದೀಲು (Solar Lantern) ವಿತರಿಸುವ ಯೋಜನೆ | ಒಟ್ಟು ಯೋಜನಾ ವೆಚ್ಚ (ರೂ. ಕೋಟಿಗಳಲ್ಲಿ) |
|---|---|---|---|---|---|---|
| 1. | ಫಲಾನುಭವಿಗಳ ಸಂಖ್ಯೆ | ಸಾಮಾನ್ಯ ವರ್ಗ | 99 | 357 | 26666 | – |
| | | ಎಸ್.ಸಿ. | 19 | 156 | | – |
| | | ಎಸ್.ಟಿ | 13 | 156 | | – |
| | | ಒಟ್ಟು | **131** | **669** | | – |
| 2. | ಫಲಾನುಭವಿಗಳ ವಂತಿಗೆ (ಶೇಕಡಾವಾರು) | ಸಾಮಾನ್ಯ ವರ್ಗ | 25% | 50% | 25% | – |
| | | ಎಸ್.ಸಿ. | 15% | 25% | 25% | – |
| | | ಎಸ್.ಟಿ | 15% | 25% | 25% | – |
| 3 | MNRE ವಂತಿಗೆ (ಶೇಕಡಾವಾರು) | | 30% | 30% | – | – |
| 4 | ರಾಜ್ಯ ಸರ್ಕಾರದ ವಂತಿಗೆ | ಸಾಮಾನ್ಯ ವರ್ಗ | 45% | 20% | 75% | – |
| | | ಎಸ್.ಸಿ. | 55% | 45% | 75% | – |
| | | ಎಸ್.ಟಿ | 55% | 45% | 75% | – |
| 5 | ಸೌರವಿದ್ಯುತ್ ಯೋಜನಾ ವೆಚ್ಚ (ರೂ. ಕೋಟಿಗಳಲ್ಲಿ) | ರಾಜ್ಯ ಸರ್ಕಾರದ ವಂತಿಗೆ | 4.00 | 3.00 | 3.00 | 10.00 |
| | | MNRE ವಂತಿಗೆ | 2.46 | 2.83 | 0.00 | 5.29 |
| | | ಫಲಾನುಭವಿಗಳ ವಂತಿಗೆ | 1.85 | 3.61 | 1.00 | 6.46 |
| | | ಒಟ್ಟು | **8.31** | **9.44** | **4.00** | **21.75** |

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 40 ಪಿಎಸ್‌ಆರ್ 2013, (ಭಾಗ–1), ಬೆಂಗಳೂರು, ದಿನಾಂಕ: 30–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರದ ವತಿಯಿಂದ ರೂ. 10 ಕೋಟಿ ಸಹಾಯಧನ ಒಳಗೊಂಡ, ಸಮಾರು ರೂ. 21.75 ಕೋಟಿಯ, ಈ ಕೆಳಕಂಡ 3 ಸೌರ ವಿದ್ಯುತ್ ಯೋಜನೆಗಳನ್ನು 2013–14ನೇ ಸಾಲಿನಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವತಿಯಿಂದ ಅನುಷ್ಠಾನಗೊಳಿಸಲು ಆದೇಶಿಸಿದೆ.

(a) ಅನುಬಂಧ–1ರಲ್ಲಿ ವಿವರಿಸಿದಂತೆ ರೈತರಿಗೆ ಸೌರ ವಿದ್ಯುತ್ ಚಾಲಿತ ನೀರಾವರಿ ಪಂಪ್‌ಸೆಟ್‌ನ್ನು ನೀಡಲು.

(b) ಅನುಬಂಧ–2ರಲ್ಲಿ ವಿವರಿಸಿದಂತೆ ಜಾಲ ರಹಿತ ಸೌರ ವಿದ್ಯುತ್ ಮೇಲ್ಛಾವಣಿ ಯೋಜನೆಯನ್ನು ಅನುಷ್ಠಾನಗೊಳಿಸಲು.

(c) ಅನುಬಂಧ–3ರಲ್ಲಿ ವಿವರಿಸಿದಂತೆ ಎಲ್.ಇ.ಡಿ. ಸೌರ ಶಕ್ತಿ ಕಂದೀಲು (Lanterns) ಗಳನ್ನು ಶೇ. 75ರಷ್ಟು ಅನುದಾನದಲ್ಲಿ ವಿತರಿಸಲು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 987 EXP-1/2013 ದಿನಾಂಕ: 07–09–2013, ಯೋಜನಾ ಇಲಾಖೆ ಟಿಪ್ಪಣಿ ಸಂಖ್ಯೆ: PD 11 MCM 2013, ದಿನಾಂಕ: 11–09–2013 ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಟಿಪ್ಪಣಿ ಸಂಖ್ಯೆ: ಗ್ರಾಅಪ 36 ಜೈಆಯ 2013ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**P.R. 76**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ **ತುಮಕೂರು** ಜಿಲ್ಲೆಯ ಪಾವಗಡ ತಾಲ್ಲೂಕಿನ 386 ಜನ ಜೀತವಿಮುಕ್ತರಿಗೆ 2013–14ನೇ ಸಾಲಿನಲ್ಲಿ ಪೂರ್ಣ ಮಾಸಾಶನ ಸಹಾಯಾನುಧನವನ್ನು ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**

1) ಸರ್ಕಾರದ ಆದೇಶದ ಸಂಖ್ಯೆ ಗ್ರಾಅಪ:15.ಆರ್‌ಬಿಎಲ್,2004 ದಿನಾಂಕ:21–01–2006.

2) ಜಿಲ್ಲಾಧಿಕಾರಿ, ತುಮಕೂರು ಇವರ ಪತ್ರ ಸಂ:ಜೀತಸಿಆರ್–26/2013–14, ದಿನಾಂಕ: 20–01–2014

3) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು ಇವರ ಪತ್ರ ಸಂ:ತುಜಿಪ/ಅಭಿ/ಜೀತ/31/2012–13, ದಿನಾಂಕ: 28–09–2013 ಮತ್ತು 23–01–2014

ಪ್ರಸ್ತಾವನೆ :

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ:21–01–2006ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ದಿನಾಂಕ:21–01–2006ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ ಜೀತ ಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ.300.00 ರಂತೆ ಸಹಾಯಧನವನ್ನು **ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.**

ಉಪವಿಭಾಗಾಧಿಕಾರಿ **ಮಧುಗಿರಿ ಉಪವಿಭಾಗ ಇವರು ತುಮಕೂರು ಜಿಲ್ಲೆಯ ಪಾವಗಡ** ತಾಲ್ಲೂಕಿಗೆ ಸೇರಿದ 386 ಜನ ಜೀತದಾಳುಗಳ ಇರುವಿಕೆಯ ಬಗ್ಗೆ ಪರಿಶೀಲನೆ ನಡೆಸಿ ಅವರುಗಳನ್ನು ದಿನಾಂಕ: 29–11–2011(385) ಮತ್ತು ದಿನಾಂಕ:09–01–2013 ರಂದು (1) ಒಟ್ಟು 386 ಜೀತದಾಳುಗಳನ್ನು ಜೀತವಿಮುಕ್ತಗೊಳಿಸಿ **ಜೀತವಿಯುಕ್ತ ಪತ್ರಗಳನ್ನು** ವಿತರಿಸಿರುವ ಕುರಿತಾಗಿ ಉಲ್ಲೇಖ (2)ರ ಪತ್ರದಲ್ಲಿ ಜಿಲ್ಲಾಧಿಕಾರಿ, ತುಮಕೂರು ಇವರು ಜಿಲ್ಲಾ ಪಂಚಾಯತ್ ಮೈಸೂರು ರವರಿಗೆ ವರದಿ ಮಾಡಿರುತ್ತಾರೆ. ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತಿ ತುಮಕೂರು ರವರು ಒಟ್ಟು 386 ಜನ ಜೀತವಿಮುಕ್ತರಿಗೆ ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನ ಬಿಡುಗಡೆ ಮಾಡಲು ಉಲ್ಲೇಖ (3)ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ಒಟ್ಟು 386 ಜೀತ ವಿಮುಕ್ತರಿಗೆ **(ಪರಿಶಿಷ್ಟಜಾತಿ–328, ಪರಿಶಿಷ್ಟ ಪಂಗಡ–24 ಹಾಗೂ ಸಾಮಾನ್ಯ ವರ್ಗಕ್ಕೆ ಸೇರಿದ–34 ಜನ ಜೀತವಿಮುಕ್ತರಿಗೆ)** ಮಾಸಾಶನ ಸಹಾಯಾನುಧನವನ್ನು ಒದಗಿಸುವುದು ಅವಶ್ಯವಿದ್ದು, 2013–14ನೇ ಸಾಲಿನಲ್ಲಿ ರಾಜ್ಯ ಸರ್ಕಾರದ ಆಯವ್ಯಯದಡಿ ಲೆಕ್ಕಶೀರ್ಷಿಕೆ 2230–01–198–06–01–300 (2230–01–101–0–01) (ಯೋಜನೆ)ಯಡಿ ಒದಗಿಸಿರುವ ಒಟ್ಟು ರೂ.310.80 ಲಕ್ಷ ಅನುದಾನದಿಂದ, ರೂ.27,79,200/–ಗಳ ಅನುದಾನವನ್ನು ತುಮಕೂರು ಜಿಲ್ಲಾ ಪಂಚಾಯಿತಿಗೆ ಬಿಡುಗಡೆಗೊಳಿಸಲು ತೀರ್ಮಾನಿಸಿದೆ. ಆದುದರಿಂದ ಈ ಬಿಡುಗಡೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 05.ಆರ್‌ಬಿಎಲ್.2012 ಬೆಂಗಳೂರು, ದಿನಾಂಕ:11–02–2014**

ರಾಜ್ಯ ಸರ್ಕಾರದ **ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ** ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ಒಟ್ಟು 386 ಜನ ಜೀತವಿಮುಕ್ತರಿಗೆ 2013–14ನೇ ಸಾಲಿನಲ್ಲಿ ಒಟ್ಟು 24 ತಿಂಗಳು ಅವಧಿಗೆ ತಗಲುವ (**385 ಜೀತವಿಮುಕ್ತರಿಗೆ** ಡಿಸೆಂಬರ್–2012 ರಿಂದ ನವೆಂಬರ್ 2014ರ ವರೆಗೆ ಹಾಗೂ **ಒಬ್ಬ ಜೀತವಿಮುಕ್ತನಿಗೆ** ಫೆಬ್ರವರಿ 2013 ರಿಂದ ಜನವರಿ 2015ರ ವರೆಗೆ ಒಟ್ಟು **ರೂ.27,79,200/–** (ಇಪ್ಪತ್ತೇಳು ಲಕ್ಷದ ಎಪ್ಪತ್ತೊಂಬತ್ತು ಸಾವಿರದ ಇನ್ನೂರು ರೂಪಾಯಿಗಳೂ ಮಾತ್ರ)ಗಳನ್ನು ತುಮಕೂರು ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

1. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ–01–ಕಾರ್ಮಿಕ–198–ಗ್ರಾಮ ಪಂಚಾಯಿತಿಗಳಿಗೆ ಸಹಾಯ–6–ಗ್ರಾಮ ಪಂಚಾಯಿತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)–01–ಬ್ಯಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯಿತಿ (ಯೋಜನೆ) ಗೆ ಜಮಾ ಮಾಡತಕ್ಕದ್ದು.
2. ಈ ಆದೇಶದಲ್ಲಿ ನಮೂದಿಸಿರುವ ಜೀತ ವಿಮುಕ್ತರ ವಿವರಗಳನ್ನು ಉಪವಿಭಾಗಾಧಿಕಾರಿ, ಮಧುಗಿರಿ ಉಪವಿಭಾಗ, ಹಾಗೂ ಜಿಲ್ಲಾಧಿಕಾರಿ ತುಮಕೂರು ರವರ ವರದಿಯ ಆಧಾರದಂತೆ ಪರಿಗಣಿಸಿ ಜೀತ ವಿಮುಕ್ತರಿಗೆ ತಕ್ಷಣದಿಂದಲೇ ಪರಿಹಾರ ನೀಡುವ ಅಗತ್ಯತೆ ಹಿನ್ನೆಲೆಯಲ್ಲಿ ಮಾಶಾಸನ ಮೊತ್ತವನ್ನು ಮಂಜೂರು ಮಾಡಲಾಗಿದ್ದು. ಸದರಿ ಜೀತವಿಮುಕ್ತರ ಇರುವಿಕೆಯ ಬಗ್ಗೆ ತಮ್ಮ ಜಿಲ್ಲೆಯ ಜಿಲ್ಲಾಧಿಕಾರಿ/ ಉಪವಿಭಾಗಾಧಿಕಾರಿ, ಮಧುಗಿರಿ ಉಪವಿಭಾಗ ಇವರ ಮುಖಾಂತರ ಖಾತರಿ ಮಾಡಿಕೊಳ್ಳುವ ಮೂಲಕ ಮೊತ್ತವನ್ನು **ತಪ್ಪದೇ 15 ದಿನದೊಳಗಾಗಿ ಪಾವತಿಸಲು ಕ್ರಮ ಕೈಗೊಳ್ಳುವುದು ಹಾಗೂ ಈ ಜೀತವಿಮುಕ್ತರ ಪೂರ್ಣಮಾಹಿತಿಯನ್ನು ಹಾಗೂ ಅವರುಗಳಿಗೆ ಹಣ ಪಾವತಿಸಿರುವ ಮಾಹಿತಿಯನ್ನು ಪ್ರತ್ಯೇಕ ವಹಿಯಲ್ಲಿ ನಿರ್ವಹಿಸತಕ್ಕದ್ದು. ಬಿಡುಗಡೆಗೊಳಿಸಿದ ಅನುದಾನಕ್ಕೆ ಹಣ ದೃಢೀಕರಣ ಪತ್ರವನ್ನು ಒಂದು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಸರ್ಕಾರವು ಬಿಡುಗಡೆಗೊಳಿಸಿದ ಅನುದಾನವು ಯಾವುದೇ ಕಾರಣಕ್ಕೂ 2013–14ನೇ ಸಾಲಿನಲ್ಲಿ ವ್ಯಪಗತವಾಗದಂತೆ ಕ್ರಮವಹಿಸುವುದು.**
3. ಈ ಆದೇಶವನ್ನು ಇಲಾಖಾ ಆಂತರಿಕ **ಆರ್ಥಿಕ ಸಲಹೆಗಾರರ ಸಹಮತಿ ಸಂ:ಗ್ರಾಅಪ 84 ಪಿಬಿಎಸ್ 2013 ದಿನಾಂಕ: 10–02–2014** ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರೋಹಿಣಿ ಸಿಂಧೂರಿ**
ನಿರ್ದೇಶಕರು, (ಇ–ಆಡಳಿತ) ಮತ್ತು
ಸ್ವ ಉದ್ಯೋಗ ಕಾರ್ಯಕ್ರಮಗಳು
ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

PR-263

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಒಂಬುಡ್ಸ್‌ಮನ್‌ರವರ ಆದೇಶಗಳ ಮೇಲಿನ ಮನವಿಗಳ ಪರಿಶೀಲನೆಗಾಗಿ ಮೇಲ್ಮನವಿ ಪ್ರಾಧಿಕಾರಕ್ಕೆ ಸದಸ್ಯರನ್ನು ನೇಮಕ ಮಾಡುವ ಕುರಿತು.

**ಓದಲಾಗಿದೆ :** ಭಾರತ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಸೂಚನಾ ಪತ್ರ ಸಂ.ನಂ.ಎ–1101/21/2008–NREGA (Part-III), ದಿ: 24–05–2013.

**ಪ್ರಸ್ತಾವನೆ :**

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ, 2005 ರ ಪ್ರಕರಣ 27 ರ ಉಪ ಪ್ರಕರಣ (1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸರ್ಕಾರವು ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಸ್ವೀಕರಿಸಲಾಗುವ ದೂರುಗಳನ್ನು ಇತ್ಯರ್ಥ ಪಡಿಸುವ ಸಲುವಾಗಿ ಒಂಬುಡ್ಸಮನ್‌ಗಳನ್ನು ನೇಮಕಾತಿ ಮಾಡಲು ಅವಕಾಶ ಮಾಡಿದೆ. ಒಂಬುಡ್ಸಮನ್‌ರವರು ಹೊರಡಿಸುವ ಆದೇಶಗಳ ಮೇಲಿನ ಮನವಿಗಳ ಪರಿಶೀಲನೆ ಅವಶ್ಯಕತೆ ಇರುತ್ತದೆ. ಸದರಿ ಒಂಬುಡ್ಸ್‌ಮನ್ ಮಾರ್ಗಸೂಚಿಗಳ ಕಂಡಿಕೆ 13.4 ರನ್ವಯ ಒಂಬುಡ್ಸ್‌ಮನ್ ನಿರ್ಣಯಗಳಿಗೆ ಸಂಬಂಧಿಸಿದ ಮನವಿಗಳು/ಅಪೀಲುಗಳನ್ನು ಇತ್ಯರ್ಥಪಡಿಸಲು ಮೇಲ್ಮನವಿ ಪ್ರಾಧಿಕಾರಕ್ಕೆ ಶಿಕ್ಷಣ ಕ್ಷೇತ್ರ, ನಾಗರೀಕ ಸಮಾಜಸೇವಾ ಕ್ಷೇತ್ರ ಹಾಗೂ ನಿವೃತ್ತ ನಾಗರೀಕ ಸೇವಾ ಕ್ಷೇತ್ರದ ಪ್ರತಿನಿಧಿಗಳನ್ನೊಳಗೊಂಡಂತೆ ಮೂರು ಮಂದಿ ಸದಸ್ಯರುಳ್ಳ ಒಂದು ಮೇಲ್ಮನವಿ ಪ್ರಾಧಿಕಾರವನ್ನು ರಚಿಸಲು ಹಾಗೂ ಸದರಿ ಮೇಲ್ಮನವಿ ಪ್ರಾಧಿಕಾರಕ್ಕೆ ಸದಸ್ಯರನ್ನು ನೇಮಕ ಮಾಡುವ ಅಗತ್ಯತೆ ಕಂಡು ಬಂದಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 594 ಮಗಾಂಉಖಾಯೋ 2013 ಬೆಂಗಳೂರು, ದಿನಾಂಕ: 01-01-2014**

ಭಾರತ ಸರ್ಕಾರವು ದಿ: 24-05-2013ರ ಒಂಬುಡ್ಸ್‌ಮನ್ ಮಾರ್ಗಸೂಚಿ ಕಂಡಿಕೆ 13.4 ರನ್ವಯ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ನೇಮಕವಾದ ಒಂಬುಡ್ಸ್‌ಮನ್‌ರವರ ಆದೇಶಗಳ ಮೇಲಿನ ಮೇಲ್ಮನವಿಗಳ ಪರಿಶೀಲನೆ ಹಾಗೂ ಇತ್ಯರ್ಥಪಡಿಸುವ ಸಲುವಾಗಿ ಮೇಲ್ಮನವಿ ಪ್ರಾಧಿಕಾರ ರಚಿಸಿದ್ದು, ಸದರಿ ಮೇಲ್ಮನವಿ ಪ್ರಾಧಿಕಾರಕ್ಕೆ ಕೆಳಕಂಡ ಸದಸ್ಯರನ್ನು ನೇಮಕಾತಿ ಮಾಡಿ ಆದೇಶಿಸಿದೆ.

| ಕ್ರಸಂ | ಹೆಸರು | ವಿಳಾಸ | ಕ್ಷೇತ್ರ |
|---|---|---|---|
| 1 | ಡಾ॥ ವಿ.ಟಿ.ಪಾಟೀಲ, ವಿಶ್ರಾಂತ ಉಪ ಕುಲಪತಿ, ಪಾಂಡಿಚೇರಿ ವಿಶ್ವವಿದ್ಯಾಲಯ. | ಡಾ॥ವಿ.ಟಿ. ಪಾಟೀಲ, ವಿಶ್ರಾಂತ ಉಪಕುಲಪತಿ, ಪಾಂಡಿಚೆರಿ ವಿಶ್ವವಿದ್ಯಾಲಯ, ಪ್ಲಾಟ್ ನಂ-03, ದೇವಿ ಅಪಾರ್ಟ್‌ಮೆಂಟ್, ವೈ.ಎಸ್. ಕಾಲೋನಿ, ವಿದ್ಯಾಗಿರಿ, ಧಾರವಾಡ, ಕರ್ನಾಟಕ | ಶಿಕ್ಷಣ ಕ್ಷೇತ್ರ |
| 2 | ಡಾ॥ ಹೆಚ್. ಶ್ರೀನಿವಾಸಯ್ಯ, ಸ್ವಾತಂತ್ರ ಯೋಧರು ಹಾಗೂ ಅಧ್ಯಕ್ಷರು ಗಾಂಧಿ ಸ್ಮಾರಕ ನಿಧಿ ಸಂಸ್ಥೆ , ಬೆಂಗಳೂರು. | ಡಾ॥ ಹೆಚ್. ಶ್ರೀನಿವಾಸಯ್ಯ, ಸ್ವಾತಂತ್ರ ಯೋಧರು ಹಾಗೂ ಅಧ್ಯಕ್ಷರು ಗಾಂಧಿ ಸ್ಮಾರಕ ನಿಧಿ ಸಂಸ್ಥೆ, ನಂ-102, 6ನೇ ಅಡ್ಡ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-560003 | ನಾಗರಿಕ ಸಮಾಜ ಸೇವಾ ಕ್ಷೇತ್ರ |

ಮೇಲ್ಮನವಿ ಪ್ರಾಧಿಕಾರದ ಸದಸ್ಯರ ನೇಮಕಾತಿ ಆದೇಶವು, ಈ ಆದೇಶ ಹೊರಡಿಸಿದ ದಿನಾಂಕದಿಂದ, ರಾಜ್ಯ ಸರ್ಕಾರದ ಮುಂದಿನ ಆದದೇಶದವರೆಗೆ ಜಾರಿಯಲ್ಲಿರುವುದು. ಈ ಆದೇಶವು ದಿ: 05-11-13 ರಿಂದ ಪೂರ್ವಾನ್ವಯ ಜಾರಿಗೆ ಬಂದಿರುತ್ತದೆ.

ದಿನಾಂಕ: 16-12-2013ರ ಕಾರ್ಯಕಾರಿ ಸಮಿತಿಯಲ್ಲಿ ಅನುಮೋದಿಸಿರುವಂತೆ ಮೇಲ್ಮನವಿ ಪ್ರಾಧಿಕಾರದ ಸದಸ್ಯರುಗಳಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಹಾಗೂ ಇತರೆ ಸೌಲಭ್ಯಗಳನ್ನು ಪಡೆಯಲು ಅರ್ಹರಿರುವರು.

1. ಮಾಹೆಯಾನ ರೂ. 25,000/- (ಇಡಿಗಂಟು) ಗೌರವಧನವನ್ನು ಪಾವತಿಸಲು ನಿಗಧಿಪಡಿಸಿದೆ.
2. ಒಂಬುಡ್ಸ್‌ಮನ್‌ಗಳ ಆದೇಶದ ಮೇಲ್ಮನವಿ ಇತ್ಯರ್ಥ ಪಡಿಸಲು ಕರ್ತವ್ಯ ನಿರ್ವಹಿಸಲು ಪ್ರತಿ ದಿನಕ್ಕೆ ರೂ. 2,500/- ರಂತೆ ಗರಿಷ್ಠ 20 ದಿನಗಳಿಗೆ ರೂ. 50,000/- ಮೀರದಂತೆ ಸಿಟ್ಟಿಂಗ್ ಫೀ ಪಾವತಿಸಲು ನಿಗಧಿಪಡಿಸಿದೆ.
3. ಕೆ.ಸಿ.ಎಸ್.ಆರ್ ನಲ್ಲಿ "ಎ" ಶ್ರೇಣಿಯ ಅಧಿಕಾರಿಗಳಿಗೆ ನೀಡಲಾಗುವ ದರದಲ್ಲಿ ನಿರ್ಧಿಷ್ಟ ಪ್ರಯಾಣ ಭತ್ಯೆ ಪಡೆಯಲು ಅರ್ಹರಿರುತ್ತಾರೆ.
4. ಆಯುಕ್ತಾಲಯದ ವತಿಯಿಂದ ಮೊಬೈಲ್ ಸೆಟ್ ಹಾಗೂ ಸಿ.ಯು.ಜಿ ದೂರವಾಣಿ ಸೌಲಭ್ಯವನ್ನು ಪಡೆಯಲು ಅರ್ಹರಿರುತ್ತಾರೆ.
5. ಆಯುಕ್ತಾಲಯದ ಮೇಲ್ಮನವಿ ಪ್ರಾಧಿಕಾರದ ಕಛೇರಿಯಲ್ಲಿ ಕಾರ್ಯನಿರ್ವಹಿಸುವುದು. ಅವರಿಗೆ ಆಯುಕ್ತಾಲಯದಿಂದ ವಿಚಾರಣೆ ದಿನಗಳಂದು ಅಗತ್ಯ ಕೊಠಡಿ ಸಿಬ್ಬಂದಿ ಇತ್ಯಾದಿ ಸೌಲಭ್ಯಗಳನ್ನು ಒದಗಿಸುವುದು.

ಇದಕ್ಕಾಗಿ ತಗಲುವ ವೆಚ್ಚವನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಶೇ. 6ರ ಆಡಳಿತಾತ್ಮಕ ವೆಚ್ಚದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

(ಸೇವೆಗಳು ಬಿ ಮತ್ತು ಸಿ)

**PR-264**

**SC - 50**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ-2011 (SECC-2011) ನಡೆಸಲು ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶದ ಸಮ ಸಂಖ್ಯೆ ಗ್ರಾಅಪ:17-10-2011 ಮತ್ತು 23-05-2012

2) ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಕ್ಷಿಣ ಕನ್ನಡ, ಮಂಗಳೂರು ಇವರ ಪತ್ರದ ಸಂಖ್ಯೆ: ಡಿಕೆಡಿಸಿ/ಸಿ.ಇ.ಎನ್/3/ ಎಸ್.ಇ.ಸಿ.ಸಿ/2011-12(ಸಿಎ) ದಿನಾಂಕ: 26-12-2013.

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ರಾಜ್ಯದಲ್ಲಿ ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ 2011 (SECC-2011) ನಡೆಸಲು ತೀರ್ಮಾನಿಸಿದೆ. ಓದಲಾಗಿದೆ (1) ರ ದಿನಾಂಕ: 17–10–2011 ಮತ್ತು ದಿನಾಂಕ: 23–05–2012 ರನ್ವಯ ಒಟ್ಟು ಅನುದಾನ 172ಲಕ್ಷಗಳನ್ನು (ಒಂದು ಕೋಟಿ ಎಪ್ಪತ್ತೆರಡು ಲಕ್ಷಗಳು ಮಾತ್ರ) ರಾಜ್ಯ ಸರ್ಕಾರವು ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನೀಡಿದ ಮಾದರಿಯಲ್ಲಿ ಒಟ್ಟು ಅನುದಾನದ ಶೇಕಡ 90ರಷ್ಟು ಅನುದಾನವನ್ನು ದಕ್ಷಿಣ ಕನ್ನಡ ಜಿಲ್ಲೆಯ ಪ್ರಧಾನ SECC-2011 ಅಧಿಕಾರಿಗಳಿಗೆ ಬಿಡುಗಡೆಗೊಳಿಸಿದೆ. ಓದಲಾಗಿದೆ (2) ರಲ್ಲಿ ತಾವು ಗಣತಿ ಕಾರ್ಯಕ್ಕೆ ಬಾಕಿ ಅನುದಾನ ರೂ. 98 ಲಕ್ಷಗಳನ್ನು ಕೋರಿರುತ್ತೀರಿ. ಆದರೆ, ರಾಜ್ಯ ಸರ್ಕಾರದಲ್ಲಿ ಅನುದಾನದ ಲಭ್ಯತೆ ಕಡಿಮೆ ಇರುವ ಕಾರಣ ಕರಡು ಗಣತಿ ಪಟ್ಟಿ ಮುದ್ರಣದ ವೆಚ್ಚ ಮತ್ತು ಇತರೆ ವೆಚ್ಚಗಳಿಗೆ ರೂ. 15 ಲಕ್ಷಗಳನ್ನು ಬಿಡುಗಡೆ ಮಾಡಲು ನಿರ್ಧರಿಸಲಾಗಿದೆ. ಆದಕಾರಣ ರೂ. 15 ಲಕ್ಷಗಳನ್ನು ಬಿಡುಗಡೆ ಮಾಡಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 10 ಎಸ್‌ಜೆವೈ 2010 ಬೆಂಗಳೂರು, ದಿನಾಂಕ: 04–02–2014**

ರಾಜ್ಯ ಸರ್ಕಾರವು ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ –2011 (SECC-2011) ನಡೆಸಲು ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳು ಹಾಗೂ ಪ್ರಧಾನ SECC-2011 ಅಧಿಕಾರಿಗಳು ರೂ. 15 ಲಕ್ಷಗಳ (ರೂ. ಹದಿನೈದು ಲಕ್ಷಗಳು ಮಾತ್ರ) ಅನುದಾನವನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

**ಷರತ್ತುಗಳು:**

- ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011 ಗಾಗಿಯೇ ತೆರೆದಿರುವ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು. S.B. ಖಾತೆ ಸಂಖ್ಯೆ: 64085310348, ಐಎಫ್‌ಎಸ್‌ಸಿ ಕೋಡ್– SEMY 0040149, Bank Code-40419, ಪಿ.ಎನ್. ನಂ.93. ಜಿಹೆಚ್‌ಎಸ್ ರಸ್ತೆ, ಮಂಗಳೂರು ಬ್ಯಾಂಕ್ ಖಾತೆಗೆ ಜಮಾ ಮಾಡತಕ್ಕದ್ದು.
- ಅನುದಾನವನ್ನು ರಾಜ್ಯ ಮಟ್ಟದಲ್ಲಿ ತೆರೆದಿರುವ State Bank of Mysore, G SEVA Branch, ನಲ್ಲಿ ತೆರೆದಿರುವ ಬ್ಯಾಂಕ್ ಖಾತೆ ನಂ. 64084063002 ಯಿಂದ ಪ್ರಧಾನ SECC-2011ರ ಅಧಿಕಾರಿಗಳು ತೆರೆದಿರುವ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಎಸ್‌ಬಿಎಂ ಬ್ಯಾಂಕ್ ಖಾತೆಗೆ ವರ್ಗಾಯಿಸುವುದು.
- ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ –2011 ಕ್ಕೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮಾರ್ಗಸೂಚಿಯಂತೆಯೇ ಅನುದಾನವನ್ನು ಉಪಯೋಗಿಸತಕ್ಕದ್ದು.
- ಗಣತಿಗಾಗಿ ಬಿಡುಗಡೆ ಮಾಡಿದ ಅನುದಾನವನ್ನು ಬೇರೆ ಯಾವ ಉದ್ದೇಶಗಳಿಗೂ ಬಳಸದೇ ಕರಡು ಮತ್ತು ಅಂತಿಮ ಪಟ್ಟಿ ಮುದ್ರಣಕ್ಕಾಗಿ ಹಾಗೂ COTS ನಲ್ಲಿ ಅವಶ್ಯಕ ವೆಚ್ಚಗಳಿಗಾಗಿ ಮಾತ್ರ ಬಳಸುವುದು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಆಗಿಂದಾಗ್ಗೆ ನೀಡುವ ಸೂಚನೆಗಳನ್ವಯ ವೆಚ್ಚ ಮಾಡುವುದು.
- ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳು ಬಿಡುಗಡೆಗೊಳಿಸಿದ ಅನುದಾನಕ್ಕೆ ಉಪಯೋಗ ಪ್ರಮಾಣ ಪತ್ರವನ್ನು ರಾಜ್ಯದ ಎಸ್‌ಇಸಿಸಿ–2011 ನೋಡಲ್ ಅಧಿಕಾರಿಯಾದ ನಿರ್ದೇಶಕರು (ಇ–ಆಡಳಿತ) ಮತ್ತು ಸ್ವ ಉಕಾ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರೋಹಿಣಿ ಸಿಂಧೂರಿ**
ನಿರ್ದೇಶಕರು, (ಇ–ಆಡಳಿತ)
ಮತ್ತು ಸ್ವ ಉದ್ಯೋಗ ಕಾರ್ಯಕ್ರಮಗಳು
ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಮತ್ತು
ರಾಜ್ಯದ ನೋಡಲ್ ಅಧಿಕಾರಿ, ಎಸ್‌ಇಸಿಸಿ–2011,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

PR-265
SC -10

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** 2013–14ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯವಾದಿಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 32 ಎಲ್‌ಸಿಎಲ್ 1982 ದಿನಾಂಕ: 17/18/03/198 ಮತ್ತು ತಿದ್ದುಪಡಿ ದಿನಾಂಕ: 30–10–1996ರ ಅಧಿಸೂಚನೆ ಸಂಖ್ಯೆ:ಲಾ 112 ಎಲ್‌ಸಿಎಲ್ 1996.
2. ನಿಯಮಗಳ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಲಾ 120 ಎಲ್‌ಸಿಎಲ್ 2007, ದಿನಾಂಕ: 18–02–2008 ಮತ್ತು ಸೇರ್ಪಡೆ ದಿನಾಂಕ: 16–05–2008.
3. ದಿನಾಂಕ: 07–01–2014 ಮತ್ತು ದಿನಾಂಕ: 01–02–2014ರ ಸರ್ಕಾರಿ ಆದೇಶ ಸಂಖ್ಯೆ: ಲಾ 104 ಎಲ್‌ಸಿಎಲ್ 2013.
4. ಕೊಪ್ಪಳ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಯ ಪತ್ರ ಸಂಖ್ಯೆ: 626/2014 ದಿನಾಂಕ: 05/02/2014.
5. ಬೆಂಗಳೂರು ಗ್ರಾಮಾಂತರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಯ ಪತ್ರ ಸಂಖ್ಯೆ: 19/2012–13 ದಿನಾಂಕ: 05–02–2014.
6. ಕೋಲಾರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಯ ಪತ್ರ ಸಂಖ್ಯೆ: 513/2014 ದಿನಾಂಕ: 11–02–2014.

b) The company shall take all statutory and other necessary clearances from the competent authorities including Govt. of India and shall submit milestones/progress in the implementation of the project regularly, which will be monitored by the Department.

This approval is valid for a period of **two years** from the date of issue of this Government Order.

By Order and in the name of the Governor of Karnataka,

**S. UMADEVI,**
Desk Officer (Technical Cell),
Commerce and Industries Department.

**PR 256**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :–** ಶ್ರೀ ಹೆಚ್. ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧದ ಪಠ್ಯ ಪುಸ್ತಕಗಳ ಬೈಂಡಿಂಗ್ ಕೆಲಸಕ್ಕಾಗಿ ಹಾಟ್ ಮೆಲ್ಟ್ ಗ್ಲೂ ಖರೀದಿಯ ಅವ್ಯವಹಾರದ ಬಗ್ಗೆ ವಿಚಾರಣೆ ಕುರಿತು ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :–**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 164 ಎಸ್‌ಇಎನ್ 2007, ದಿನಾಂಕ:06–02–2008.
2) ಮಾನ್ಯ ಲೋಕಾಯುಕ್ತರವರ ಕಚೇರಿಯ ಪತ್ರ ಸಂಖ್ಯೆ: ಲೋಕ್/ಬಿ.ಸಿ.ಡಿ288/2007 ದಿನಾಂಕ: 19–10–2013.
3) ಶ್ರೀ ಹೆಚ್. ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ದಿನಾಂಕ:19–11–2013ರ ಮನವಿ.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಶ್ರೀ ಹೆಚ್. ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರು ನಿರ್ದೇಶಕರಾಗಿ ಕಾರ್ಯ ನಿರ್ವಹಿಸುವಾಗ 2005–06ನೇ ಸಾಲಿನ ಪಠ್ಯ ಪುಸ್ತಕಗಳ ಬೈಂಡಿಂಗ್ ಕೆಲಸಕ್ಕಾಗಿ ಹಾಟ್ ಮೆಲ್ಟ್ ಗ್ಲೂ ಖರೀದಿಸುವಾಗ ಟೆಂಡರ್ ನಿಯಮಗಳನ್ನು ಪಾಲಿಸದೆ ಹೆಚ್ಚಿನ ಹಣ ನೀಡಿ ಖರೀದಿಸುವ ಮೂಲಕ ಸರ್ಕಾರದ ಹಣವನ್ನು ಅಪವ್ಯಯ ಮಾಡಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಪ್ರಕರಣ 5 ಮತ್ತು 6ನ್ನು ಉಲ್ಲಂಘಿಸಿದ ಹಾಗೂ ಈ ಖರೀದಿ ಸಂಗ್ರಹಣೆಯಲ್ಲಿ ಸರಿಯಾದ ಬೆಲೆಯನ್ನು ಪಡೆಯುವಲ್ಲಿ ಅಸಡ್ಡೆ ತೋರಿ ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 15–1, 15–3 ಹಾಗೂ 16ನ್ನು ಉಲ್ಲಂಘಿಸಿರುತ್ತಾರೆ ಎಂಬ ಆರೋಪಕ್ಕಾಗಿ ಅವರಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರನ್ವಯ ನೋಟಿಸ್ ನೀಡುವ ಮೂಲಕ ಹಾಗೂ ವಿಚಾರಣಾಧಿಕಾರಿಯವರನ್ನು ನೇಮಿಸಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಗಿತ್ತು. ಈ ಮಧ್ಯೆ ಇದೇ ಆರೋಪಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಲೋಕಾಯುಕ್ತದಲ್ಲಿ ಕೂಡ ಖಾಸಗಿ ದೂರಿನ ಮೇರೆಗೆ ತನಿಖೆ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದ ಹಿನ್ನೆಲೆಯಲ್ಲಿ ಲೋಕಾಯುಕ್ತ ತನಿಖೆ ಪೂರ್ಣಗೊಳ್ಳುವುದನ್ನು ನಿರೀಕ್ಷಿಸಿ ಈ ಇಲಾಖಾ ವಿಚಾರಣೆಯನ್ನು ಸ್ಥಗಿತಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ:2ರಲ್ಲಿನ ಪತ್ರದಲ್ಲಿ ಮಾನ್ಯ ಲೋಕಾಯುಕ್ತರು ಶ್ರೀ ಹೆಚ್. ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಈ ಅಧಿಕಾರಿಯವರ ವಿರುದ್ಧ ದಾಖಲಾದ ಖಾಸಗಿ ದೂರಿನ ಮೇಲೆ ತನಿಖೆ ನಡೆಸಿ ಈ ನಿವೃತ್ತ ಅಧಿಕಾರಿಯವರ ಮೇಲೆ ಮಾಡಲಾದ ದೂರರ್ಜಿದಾರರ ಆರೋಪಗಳು ಸಮರ್ಥನಿಯವಾಗಿಲ್ಲದಿರುವುದರಿಂದ ಹಾಗೂ ಸದರಿಯವರು ದಿನಾಂಕ: 31–05–2012ರಂದು ವಯೋನಿವೃತ್ತಿ ಹೊಂದಿರುವುದರಿಂದ ಪ್ರಕರಣವನ್ನು ಮುಕ್ತಾಯ ಮಾಡಬಹುದೆಂದು ಮಾನ್ಯ ಲೋಕಾಯುಕ್ತರು ಅಭಿಪ್ರಾಯಪಟ್ಟಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ:3ರಲ್ಲಿನ ಮನವಿಯಲ್ಲಿ, ಶ್ರೀ ಹೆಚ್. ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ–ಮಾನ್ಯ ಲೋಕಾಯುಕ್ತರು ಖಾಸಗಿ ದೂರರ್ಜಿಯ ಮೇರೆಗೆ ತನಿಖೆ ನಡೆಸಿ ಪರಾಮರ್ಶಿಸಲಾಗಿರುವ ವಿಷಯ ಹಾಗೂ ಆಪಾದನೆಗಳು ಒಂದೇ ಆಗಿರುವುದು ಸುಸ್ಪಷ್ಟವಾಗಿರುವುದರಿಂದ ಮಾನ್ಯ ಲೋಕಾಯುಕ್ತರ ವರದಿಯನ್ನು ಒಪ್ಪಿ ತಮ್ಮನ್ನು ಆರೋಪಗಳಿಂದ ಮುಕ್ತಗೊಳಿಸಲು ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ವಿರುದ್ಧದ ದೂರಿನಲ್ಲಿ ಮಾನ್ಯ ಲೋಕಾಯುಕ್ತರು ತನಿಖೆಯನ್ನು ಕೈಗೊಂಡು ಪ್ರಕರಣವನ್ನು ಮುಕ್ತಾಯಗೊಳಿಸಿರುವುದರಿಂದ ಸರ್ಕಾರದಿಂದ ಆರಂಭಿಸಲಾದ ಇಲಾಖಾ ವಿಚಾರಣೆಯನ್ನು ಮುಂದುವರೆಸುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 164 ಎಸ್‌ಇಎನ್ 2007, ಬೆಂಗಳೂರು, ದಿನಾಂಕ:26–03–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಹೆಚ್. ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 164 ಎಸ್‌ಇಎನ್ 2007, ದಿನಾಂಕ:06–02–2008ರಲ್ಲಿ ಇವರು ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ 2005–06ನೇ ಸಾಲಿನ ಪಠ್ಯ ಪುಸ್ತಕಗಳ ಬೈಂಡಿಂಗ್ ಕೆಲಸಕ್ಕಾಗಿ ಹಾಟ್ ಮೆಲ್ಟ್ ಗ್ಲೂ ಖರೀದಿಸುವಾಗ ಟೆಂಡರ್ ನಿಯಮಗಳನ್ನು ಪಾಲಿಸದೆ ಹೆಚ್ಚಿನ ಹಣ ನೀಡಿ ಖರೀದಿಸುವ ಮೂಲಕ ಸರ್ಕಾರದ ಹಣವನ್ನು ಅಪವ್ಯಯ ಮಾಡಿದ ಆರೋಪಕ್ಕೆ ಸಂಬಂಧಿಸಿದಂತೆ ಆರಂಭಿಸಲಾಗಿದ್ದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಗೀತಾ ಎಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3)

**PR-353**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :–** ಶ್ರೀ ಹೆಚ್. ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧ ಮಾನ್ಯ ಲೋಕಾಯುಕ್ತಕ್ಕೆ ವಹಿಸಿದ ತನಿಖಾ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :–** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 197 ಎಸ್‌ಇಎನ್ 2007, ದಿನಾಂಕ:14–05–2009.

2) ಸರ್ಕಾರದ ಪತ್ರ ಸಂಖ್ಯೆ:ಸಿಆಸುಇ 197 ಎಸ್‌ಇಎನ್ 2007, ದಿನಾಂಕ:18–05–2011.

3) ಮಾನ್ಯ ಲೋಕಾಯುಕ್ತರವರ ಕಚೇರಿಯ ಪತ್ರ ಸಂಖ್ಯೆ: ಲೋಕ್/ಬಿಸಿಡಿ/216/209/ಎಆರ್‌ಇ–1, ದಿನಾಂಕ:07–10–2013.

**ಪ್ರಸ್ತಾವನೆ:–**

ಶ್ರೀ ಹೆಚ್. ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರು ನಿರ್ದೇಶಕರಾಗಿ ಕಾರ್ಯ ನಿರ್ವಹಿಸುವಾಗ ಈ ಕೆಳಕಂಡ ಪ್ರಮುಖ ಆರೋಪಗಳಿಗೆ ಸಂಬಂಧಿಸಿದಂತೆ ಅಂದರೆ :

1) ನಕಲಿ ದಾಖಲೆಗಳನ್ನು ಸೃಷ್ಟಿಸಿ ನಿಯಮ ಬಾಹಿರವಾಗಿ ರೂ.1.67 ಕೋಟಿ ಹಣವನ್ನು ಖಜಾನೆಯಿಂದ ಪಡೆದು ಸರ್ಕಾರಕ್ಕೆ ಮೋಸ ಮಾಡಿರುವುದು ಹಾಗೂ

ಹೊರ ರಾಜ್ಯದ ಮುದ್ರಣಾಲಯಗಳಲ್ಲಿ ನಿಯಮ ಬಾಹಿರವಾಗಿ ರಾಜ್ಯದ ಪಠ್ಯ ಪುಸ್ತಕಗಳನ್ನು ಮುದ್ರಣ ಮಾಡಿಸುವ ಮೂಲಕ ಸರ್ಕಾರಕ್ಕೆ ರೂ. 37.41 ಕೋಟಿಗಳಷ್ಟು ನಷ್ಟ ಉಂಟು ಮಾಡಿರುವುದು ಸಿ.ಎ.ಜಿ. ವರದಿಯಲ್ಲಿ ಮೂಡಿ ಬಂದಿರುತ್ತದೆ.

ಮೇಲಿನ ಆರೋಪಗಳಲ್ಲಿ ತೀವ್ರವಾದ ಕಾಯಿದೆ ನಿಯಮಗಳ ಉಲ್ಲಂಘನೆಯು ಕಂಡುಬಂದ ಕಾರಣ ಈ ಪ್ರಕರಣದಲ್ಲಿ ಉನ್ನತ ಮಟ್ಟದಲ್ಲಿ ತನಿಖೆ ನಡೆಸುವ ಅವಶ್ಯಕತೆ ಇರುವುದಾಗಿ ಸರ್ಕಾರವು ಪರಿಗಣಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಈ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ ಪ್ರಕರಣ 7(2ಎ)ರನ್ವಯ ಮಾನ್ಯ ಲೋಕಾಯುಕ್ತರಿಂದ ತನಿಖೆ ನಡೆಸಬೇಕೆಂದು ಆದೇಶಿಸಲಾಗಿತ್ತು.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಲೋಕಾಯುಕ್ತ ಕಚೇರಿಯಿಂದ ಸರ್ಕಾರಕ್ಕೆ ಬರೆಯಲಾದ ಪತ್ರ ಸಂಖ್ಯೆ: ಕಂಪ್ಲೇಂಟ್/ಲೋಕ್/ಬಿಸಿಡಿ–216/2009 ದಿನಾಂಕ:18–02–2011ರಲ್ಲಿ ಆರೋಪಗಳ ಬಗ್ಗೆ ಕೆಲವು ಸ್ಪಷ್ಟೀಕರಣಗಳನ್ನು ಕೋರಲಾದ ಮೇರೆಗೆ ಮೇಲೆ ಓದಲಾದ ಕ್ರ.ಸಂ.(2)ರ ಸರ್ಕಾರದ ಪತ್ರದಲ್ಲಿ ಮಾನ್ಯ ಲೋಕಾಯುಕ್ತರವರಿಗೆ ತನಿಖೆಗೆ ವಹಿಸಲಾದ ಮೇಲಿನ ಆರೋಪಗಳಲ್ಲಿ ರೂ.1.67 ಕೋಟಿ ಮೊತ್ತವನ್ನು ಖಜಾನೆಯಿಂದ ಪಡೆದು ಸರ್ಕಾರಕ್ಕೆ ಮೋಸ ಮಾಡಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಮಾತ್ರ ತನಿಖೆ ಕೈಗೊಳ್ಳಲು ಸೂಚಿಸಿ ಅದಕ್ಕೆ ಸಂಬಂಧಿಸಿದ ಮೂಲ ದಾಖಲೆಗಳನ್ನು ಶಿಕ್ಷಣ ಇಲಾಖೆಯಿಂದ ಪಡೆಯುವಂತೆ ಸೂಚಿಸಲಾಗಿತ್ತು ಅಲ್ಲದೆ ಅದೇ ಪತ್ರದಲ್ಲಿ ಅವಶ್ಯಕ ಮೂಲ ದಾಖಲೆಗಳನ್ನು ಮಾನ್ಯ ಲೋಕಾಯುಕ್ತ ಕಚೇರಿಗೆ ಒದಗಿಸಲು ಶಿಕ್ಷಣ ಇಲಾಖೆಗೆ ಸೂಚನೆಗಳನ್ನು ನೀಡಲಾಗಿತ್ತು. ತರುವಾಯದಲ್ಲಿ ಕೂಡ ಈ ಸಂಬಂಧ, ಅನೇಕ ಬಾರಿ ಶಿಕ್ಷಣ ಇಲಾಖೆಗೆ ಕೂಡ ದಾಖಲೆಗಳನ್ನು ಒದಗಿಸುವಂತೆ ಸೂಚನೆಗಳನ್ನು ನೀಡಲಾಗಿತ್ತು.

ಮುಂದುವರೆದು, ಹೊರ ರಾಜ್ಯದ ಮುದ್ರಣಾಲಯಗಳಲ್ಲಿ ನಿಯಮ ಬಾಹಿರವಾಗಿ ರಾಜ್ಯದ ಪಠ್ಯ ಪುಸ್ತಕಗಳನ್ನು ಮುದ್ರಣ ಮಾಡಿಸುವ ಮೂಲಕ ಸರ್ಕಾರಕ್ಕೆ ರೂ.37.41ಕೋಟಿಗಳಷ್ಟು ನಷ್ಟ ಉಂಟು ಮಾಡಿರುವ ಆರೋಪಗಳಿಗೆ ಸಂಬಂಧಿಸಿದಂತೆ, ಅಂತಹುದ್ದೇ ಪ್ರಕರಣದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 127 ಎಸ್‌ಇಎನ್ 2004, ದಿನಾಂಕ:28–06–2006ರಲ್ಲಿ ಆರೋಪಿತ ಅಧಿಕಾರಿಗೆ ಎಚ್ಚರಿಕೆಯನ್ನು ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸಿದೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 05 ಇಮುವಿ2008, ದಿನಾಂಕ:29–10–2010ರಲ್ಲಿ ದೋಷ ಮುಕ್ತರನ್ನಾಗಿಸಿದೆ. ಆದ್ದರಿಂದ, ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಗೌರವಾನ್ವಿತ ಲೋಕಾಯುಕ್ತರಿಂದ ಪುನ: ತನಿಖೆ ನಡೆಸುವ ಅಗತ್ಯ ಕಂಡು ಬರುತ್ತಿಲ್ಲವೆಂದು ಗೌರವಾನ್ವಿತ ಲೋಕಾಯುಕ್ತಕ್ಕೆ ದಿನಾಂಕ: 18–05–2011ರ ಪತ್ರದಲ್ಲಿಯೇ ತಿಳಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ.(3)ರ ಮಾನ್ಯ ಲೋಕಾಯುಕ್ತರ ಕಚೇರಿಯ ಲೋಕಾಯುಕ್ತ ಕಚೇರಿ ಪತ್ರದಲ್ಲಿ ಮಾನ್ಯ ಲೋಕಾಯುಕ್ತರು ಮಾಡಿದ ಟಿಪ್ಪಣಿಯಲ್ಲಿ :– ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆ ಇಲಾಖೆ, ಬೆಂಗಳೂರು ಇವರ ವಿರುದ್ಧ ತನಿಖೆ ನಡೆಸಲು ಕೋರಲಾದ ಮೂಲ ದಾಖಲೆಗಳನ್ನು ಒದಗಿಸದೆ ಇರುವುದರಿಂದ ಹಾಗೂ ಇವರು ಈಗಾಗಲೇ ದಿನಾಂಕ:30–04–2012ರಂದು ನಿವೃತ್ತರಾಗಿರುವುದನ್ನು ಪರಿಗಣಿಸಿ ಈ ಪ್ರಕರಣವನ್ನು ಮುಕ್ತಾಯಗೊಳಿಸಿರುವುದಾಗಿ ವರದಿ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ವಿರುದ್ಧದ ಮಾನ್ಯ ಲೋಕಾಯುಕ್ತಕ್ಕೆ ವಹಿಸಲಾಗಿದ್ದ ತನಿಖೆಯನ್ನು ಕೈ ಬಿಡಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 197 ಎಸ್‌ಇಎನ್ 2007, ಬೆಂಗಳೂರು, ದಿನಾಂಕ:18–12–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಹೆಚ್. ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧ ಆದೇಶ ಸಂಖ್ಯೆ:ಸಿಆಸುಇ 197 ಎಸ್‌ಇಎನ್ 2007, ದಿನಾಂಕ:14–05–2009ರಲ್ಲಿ ತನಿಖೆ ನಡೆಸಲು ಮಾನ್ಯ ಲೋಕಾಯುಕ್ತರಿಗೆ ವಹಿಸಲಾದ ಪ್ರಕರಣವನ್ನು ಸರ್ಕಾರವು ಕೈ ಬಿಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–6)

PR-354

*ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59*